# ಉತ್ತರಾಯಣ

( ಕವನ ಸಂಕಲನ )



ಅಂಬಿಕಾತನಯದತ್ತ





ಸಮಾಜ ಪುಸ್ತಕಾಲಯ, ಧಾರವಾಡ

ಪ್ರಕಾಶಕರು :
ಭಾಲಚಂದ್ರ ವೆಂಕಟೇಶ ಘಾಣೇಕರ
ಸಮಾಜ ಪುಸ್ತಕಾಲಯ, ಧಾರವಾಡ

ಪ್ರಥಮ ಮುದ್ರಣ, ಅಕ್ಟೋಬರ್ ೧೯೬೦



ಬೆಲೆ: ರೂ. ೧·೨೫

ಮುದ್ರಕರು :
ರವೀಂದ್ರ ಭಾಲಚಂದ್ರ ಘಾಣೇಕರ
ಪ್ರತಿಭಾ ಮುದ್ರಣ, ಧಾರವಾಡ

# ಅನುಕ್ರಮಣಿಕೆ

# ಎರಡು ಮಾತು

'ಸಂಚಯ' ಸಂಗ್ರಹ ಪ್ರಕಟವಾದ ಮೇಲೆ ಈ ವರ್ಷದ ಈ ಸಂಗ್ರಹ ಸ್ವಲ್ಪ ತಡವಾಗಿಯೇ ಬರುತ್ತಿದೆ. ಇದನ್ನು ಮುದ್ರಣಕ್ಕೆ ಸಿದ್ಧಗೊಳಿಸಿದ ಶ್ರೀ. ದತ್ತಮೂರ್ತಿ, ರಾಜಪುರೋಹಿತ, ವಾಮನ ಬೇಂದ್ರೆ ಇವರಿಗೆ ನಾನು ಉಪಕೃತನಾಗಿದ್ದೇನೆ. ಶ್ರೀ. ಘಾಣೇಕರ ಅವರು ಎಂದಿನಂತೆಯೇ ಆಸ್ಥಾ ಪೂರ್ವಕವಾಗಿ ಇದನ್ನು ಪ್ರಕಾಶಗೊಳಿಸುತ್ತಿದ್ದಾರೆ. ಅವರಿಗೆ ನನ್ನ ಅಭಿನಂದನೆ. ಈ ಸಂಗ್ರಹದೊಳಗಿನ ಹಲವು ಕವನಗಳು ತೀರ ಹೊಸವು. ಕೆಲವನ್ನು ಮುದ್ರಿಸಿದ ಪತ್ರಿಕಾ ಸಂಚಾಲಕರಿಗೂ, ಪ್ರಸರಣಗೊಳಿಸಲು ಅನುವಾದ ಆಕಾಶವಾಣಿಯವರಿಗೂ ನಾನು ಋಣಿಯಾಗಿದ್ದೇನೆ. ಕಾವ್ಯರಸಿಕರು ಯಥಾಪೂರ್ವಕವಾಗಿ ರಸಿಕತೆಯಿಂದ ಈ ಉತ್ತರಾಯಣದ ಕವನಗಳನ್ನು ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

ಸಾಧನಕೇರಿ
ವಿಜಯ ದಶಮಿ
೧೯೬೦

ದ. ರಾ. ಬೇಂದ್ರೆ

# ಭೀಷ್ಮ ಉತ್ತರಾಯಣ

ಆಕಾಶದಲ್ಲಿ ಧ್ವನಿ–ದೂರದಿಂದ

ಕೃಷ್ಣ ಕೃಷ್ಣ ಜಯ ಕೃಷ್ಣ ಮುರಾರೇ
ವಿತೃಷ್ಣನಾದೆನು ನಾ ಬಾಯಾರಿ
ದ್ವಾರಕೆ ಬಾಗಿಲ ತೆರೆಯದೊ ಬಾರಿ
ಉತ್ತರೆಯಿಂದುತ್ತರವನು ತಾರೆ.

ಕೃಷ್ಣ ಕೃಷ್ಣ ಜಯ ಜಯ ತ್ರಿಪುರಾರೇ
ಶರಪಂಜರದಲಿಯೊರಗಿರಲಾರೆ
ಕೃಷ್ಣ ಕೃಷ್ಣ ಜಯ ಕೃಷ್ಣ ಮುರಾರೇ.

**ಮೇಳದವರು**

**೧ನೆಯ ಮೇಳ :—**

ಯಾವ ಉತ್ತರಕಾಗಿ ಕಾದಿಹರೇನೊ ತಿಳಿಯದು ಭೀಷ್ಮರು
ಏಕೊ, ತಿಳಿಯದು ಭೀಷ್ಮರು.

**೨ನೆಯ ಮೇಳ :—**

ಭರತ ವಂಶದ ಕುರುಹುಗಾಣದೆ ಎಂತು ಅಳಿದರು ಭೀಷ್ಮರು
ಎಂತು ಉಳಿವರು ಭೀಷ್ಮರು.

**೧ನೆಯ ಮೇಳ :—**

ಕರಿಯ ಮೋಡವು ಎಂದೊ ಕರಗಿತು
ಬಿಳಿಯದೋ ಮೈದೋರಿದೆ
ತಂಪು ಆರಿದೆ ಚಳಿಯು ಏರಿದೆ
ಬಿಸಿ ಬಿಸಿಯ ಸುಳಿ ಬಾರದು.
ಯಾವ ಉತ್ತರಕಾಗಿ....

ಎಲ್ಲೊ ಚಿಗುರೆಲೆ ತಲೆಯ ಚಾಚಿದೆ
ಹಣ್ಣೆಲೆಯು ಬಾಯ್ಬಿಡುತಿದೆ
ಯಾವ ಉತ್ತರಕಾಗಿ.....

ರವಿಯ ಕಿರಣವು ಒಲಿದು ಬಡಗಣ
ಮೊದಲ ಹೆಜ್ಜೆಯನಿಡುತಿದೆ.
ಯಾವ ಉತ್ತರಕಾಗಿ....

**೨ನೆಯ ಮೇಳ :—**

ಎಂದೋ ನಂದಿತು ಕೌರವಾಗ್ನಿಯು
ಪಾಂಡವರ ಸೊಡರುರಿವುದು
ಅಂದು ಅಶ್ವತ್ಥಾಮ ಬೀಸಿದ
ಅಸ್ತ್ರ ಇನ್ನೂ ಇರಿವುದು.

ದ್ವಾಪರಕೆ ಎತ್ತಾಯ್ತು ಮಂಗಳ
ನಾಂದಿ ಬೇಡದೆ ಕಲಿಯುಗ
ಸೋದರಾಗ್ನಿಯು ಶಾಂತವಾಗಿದೆ
ದೀಪ ಬಯಸಿದೆ ಹೊಸ ಜಗ.

**೧ನೆಯ ಮೇಳ :—**

ಕೃಷ್ಣ ದ್ವೈಪಾಯನರು ಬಂದರು
ಭಾರವಾಗಿದೆ ಭಾರತ.
ಭೀಷ್ಮ ತಪವೋ ಗ್ರೀಷ್ಮ ತಾಪವೊ
ಫಲಿಸುವುದು ಎನೆ ಹಾರುತ.
ಯಾವ ಉತ್ತರಕಾಗಿ....

**೨ನೆಯ ಮೇಳ :—**

ಹಿಂದೆ ಬಂದನು ಧರ್ಮರಾಜನು
ಪಿತಾಮಹನಿಗೆ ಬಾಗುತ

ಕುಂತಿ ಬಂದಳು ಕುಲದ ದೈವಕೆ
ಜನ್ಮವೇ ಋಣಿಯಾಗುತ.
ಭರತವಂಶದ....

**ಭೀಷ್ಮ** :—

ಕಾಲಕಾಗಿಯೆ ಕಾದೆನೆ ನಾ । ನಿನ್ನ ಉತ್ತರಕಾದೆನು
ನಿನ್ನ ಸ್ಮರಣದಿ ಮರಣ ಮರೆತೆನು । ನಿನ್ನವನೆ ನಾನಾದೆನು ॥ಪಲ್ಲ॥
ಗೋಪಾಲಕಾ, ಚಿರಬಾಲಕಾ । ಕುಣಿ ।
ಕುಣಿಯೊ ಕಣ್ಮಣಿ ತೂಗುತಾ
ಕ್ಷಣಿಕ ಭವದೊಳು ನೀನೆ ಸಂತತಿ
ಸೂತ್ರಧಾರನು ಆಗುತಾ
ಸಂಹಾರಕಾ, ಉದ್ಧಾರಕಾ । ಹುಸಿ
ಹುಸಿಯೊ ಶ್ರೇಷ್ಠ ಸ್ವಾರ್ಥವೂ
ನಿನ್ನನುಗ್ರಹದಿಂದಲೇ ಪರ–
ಮಾರ್ಥವೂ ಪುರುಷಾರ್ಥವು.

**ಮೇಳ** :—

ತೀರಿತೋ ಹದಿನೆಂಟು ದಿನದಲಿ
ಕೌರವರ ಭೈರವ ರಣಾ
ಬಾಳಗೊಡದಿದೆ ಸಾಯಗೊಡದಿದೆ
ಭೀಷ್ಮರಿಗು ಆ ಪಿತೃಋಣಾ.

**ವ್ಯಾಸ** :—

ನಾನು ಹೆಣಗಿದೆ, ಒಣಗಿದೆ
ಧರ್ಮ ಕರ್ಮಕೆ ಗೊಣಗಿದೆ
ಕುರುಡನೋ ಧೃತರಾಷ್ಟ್ರನಾದನು
ಬರಡು ಆದನು ಪಂಡುವು
ಎರಡು ಮೀರಿದ ವಿದುರ ವಿಧುರನು
ಕೊರಡು ಆದನು ಕುಲದಲಿ.

**ಧರ್ಮ :—**

ನಾನು ಹೆಣಗಿದೆ, ಒಣಗಿದೆ
ಧರ್ಮ ಕರ್ಮಕೆ ಗೋಣಗಿದೆ
ಓ ಪಿತಾಮಹ, ನಿಮ್ಮನೆದುರಿಸ-
-ಲಾರೆ ಎಲ್ಲಿದೆ ಧೈರ್ಯವು
ಯುಧಿಷ್ಠಿರನೆಂದಂದು ಕರೆದರು
ಎಂದೊ ಹೋಗಿದೆ ಸ್ಥೈರ್ಯವು.

**ಕುಂತಿ :—**

ನಾನು ಹೆಣಗಿದೆ, ಒಣಗಿದೆ
ಧರ್ಮ ಕರ್ಮಕೆ ಗೋಣಗಿದೆ
ಸತ್ಯವತಿ ಸತಿ ಎತ್ತಿ ಹಿಡಿದಾ
ಕುಡಿಗೆ ಎರಗಿದೆ ಕತ್ತಿಯು
ಬತ್ತಲೋ ನಾನೊಣಗಲೋ ಎನು-
-ತಿತ್ತು ಹಾರುವ ನೆತ್ತಿಯು
ತಾಯಿ ಜೀವದ ಆಸೆ ಸಲಿಸಲು
ಮಾಯಿಯಾದೆನು ಮರುಗಿದ
ಬಾಯಿಯಿದ್ದೂ ಮೌನಿಯಾದೆನು
ಕಾಯೊ ಎನುತಿಹೆ ಕೃಷ್ಣಗೆ.

**೧ನೆಯ ಮೇಳ :**

ಬಂದನೊ ದ್ವಾರಾವತಿ ಯದುನಂದನ
ತಂದನೊ ಒಸಗೆಯ ಸುಮುಖದಲಿ
ಉತ್ತರೆ ಗರ್ಭಕೆ ಅಭಯ ಸಾರುತ
ಹತ್ತಿರ ಬಂದನು ಭೀಷ್ಮನಲಿ.

**೨ನೆಯ ಮೇಳ :—**

ಭೀಷ್ಮ ಪ್ರತಿಜ್ಞೆಯ ಪ್ರಶ್ನೆಗೆ ಉತ್ತರ
ಮಂಗಲ ತಂದಿದೆ ಕೃಷ್ಣಮುಖ

ಉತ್ತರ ಕ್ಷೇಮವೆ ಉತ್ತರಾಯಣವು
ಬೇರೆ ಮುಹೂರ್ತವು ಯಾವ ಸುಖ ?

**ಕೃಷ್ಣ :—**

ಓ ಬ್ರಹ್ಮಚಾರೀ, ಆಶಾ ವಿಹಾರೀ
ವಸುಗಳಗೊ ಕಾಯುವರು ವಸುಲೋಕದಲ್ಲಿ
ಆತ್ಮವೇ ಅರಳಿ ನೀ ಹೋಗು ಮರಳಿ.
ಶೋಕ, ಸಂತಾಪ, ಸೆಕೆ, ನಸು ಸೋಕದಲ್ಲಿ
ಮರಣವನು ನೀಗಿ ಮತ್ತಮರನಾಗಿ
ಸೇರು, ವೀರೋಚಿತದ ಆ ನಾಕದಲ್ಲಿ
ಕುಲಕಾಗಿ ಛಲಕಾಗಿ ಧರ್ಮಕ್ಕೆ ಕಾದಿ
ಶಾಂತರಿಗು ವೀರರಿಗು ಆದರ್ಶನಾದಿ
ಓ ಬ್ರಹ್ಮಚಾರೀ ಆಶಾ ವಿಹಾರೀ
ವಸುಗಳಗೊ ಕಾಯುವರು ವಸುಲೋಕದಲ್ಲಿ.

**ಭೀಷ್ಮ :—**

ಓಂ ಓಂ ಓಂ ಓಂS ಓಂ ಓಂS
ಕಳೆದೆ ಕಳೇವರ ಕವಚವ ಕಳಚುವ
ಕೈದುಗಾರನಂತೆ.
ಓಂ ಓಂS ಓಂ ಓಂS ಓಂ ಓಂS
ಕಳಾಧರನ ಈ ಕುಳಾರ್ವಣವದ ಕಳೆ
ಭರತಿ ಏರಲೆಂತೆ.
ಓಂ ಓಂS ಓಂ ಓಂS ಓಂ ಓಂS.

( ಭೀಷ್ಮ ನಿರ್ಯಾಣದ ಕಹಳೆ ಘೋಷ. )

ಜಯ ಕೃಷ್ಣ ಹರೇ ಶ್ರೀಕೃಷ್ಣ ಹರೇ
ಜಯ ಕೃಷ್ಣ ಹರೇ ಶ್ರೀಕೃಷ್ಣ ಹರೇ.

೧ನೆಯು ಮೇಳ :—

ಭಾರತದ ಬಿಸಿಲಿನಲಿ ಹೊತ್ತ ಭೀಷ್ಮಜ್ವಾಲೆ
ಗಂಗಾ ಪ್ರವಾಹದಲಿ ಸಂದಿತೀಗ
ಗಂಗಾ ಗ್ರವಾಹದಲಿ ಸಂದಿತೀಗ.

೨ನೆಯು ಮೇಳ :—

ಶ್ರೀಕೃಷ್ಣ ಕೃಪೆಯು ಕಿರಿಸೊಡರಾಗಿ ಅಭಿಮನ್ಯು
ಉತ್ತರೆಯು ಉದರದಲಿ ಸಿಂದಿತೀಗ.
ಉತ್ತರೆಯು ಉದರದಲಿ ಸಿಂದಿತೀಗ.

೧ನೆಯು ಮೇಳ :—

ಈ ಉತ್ತರಾಯಣಕೆ ಕಾದ ಭೀಷ್ಮರ ಕಣ್ಣು
ಮುಚ್ಚಿದವು ತೆರೆದಿತಗೊ ದೇವಯಾನ
ತೆರೆದಿತಗೊ ದೇವಯಾನ.

೨ನೆಯು ಮೇಳ :—

ದೇವ ದೇವತೆಗಳಿಗು ಆಯ್ತು ದೇವವ್ರತನ
ಭಕ್ತಿ ಚಾರಿತ್ರ್ಯವೇ ಅಮೃತ ಪಾನಾ.
ಭಕ್ತಿ ಚಾರಿತ್ರ್ಯವೇ ಅಮೃತ ಪಾನಾ.

( ದುಂದುಭಿ ಧ್ವನಿ )

೧ನೆಯು ಮೇಳ :—

ಭೀಷ್ಮ ದೇಹವು ಭಸ್ಮವಾಯಿತು
ರಶ್ಮಿಯಾಯಿತು ಉಜ್ವಲ
ತಿಲಸ್ನೇಹಕು ಕುಸುರು ಒಡೆದಿತು
ಕಳೆದು ಹೋಯಿತು ಕಶ್ಮಲ.

೨ನೆಯು ಮೇಳ :—

ಇಚ್ಛಾ ಮರಣಿಗೆ ಇಚ್ಛಾ ಪೂರ್ತಿಯೆ
ಸ್ವರ್ಗದ ಬಾಗಿಲ ತೆರೆವುದಲಾ.

ದರ್ಪಗಲಿತ ಸಂತೃಪ್ತಿಯಲ್ಲಿಯೇ
ತರ್ಪಣವೇ ಹರ್ಷಾಶ್ರುಜಲಾ.

**ತರ್ಪಣಗಳು :—**

ವಸೂನಾಮವತಾರಾಯ ಶಂತನೋರಾತ್ಮಜಾಯಚ
ಅರ್ಘ್ಯಂ ದದಾಮಿ ಭೀಷ್ಮಾಯ, ಆಬಾಲ್ಯ ಬ್ರಹ್ಮಚಾರಿಣೇ.

**ಧರ್ಮ :—**

ಭೀಷ್ಮಃ ಶಂತನವೋ ವೀರಃ ಸತ್ಯವಾದೀ ಜಿತೇಂದ್ರಿಯಃ
ಅಭಿರಾದ್ಭಿಃ ಅವಾಪ್ನೋತು ಅತ್ರ ಕ್ನಾತ್ರೋಚಿತಾಂ ಕ್ರಿಯಾಂ.

**ಶ್ರೀಕೃಷ್ಣ :—**

ವೈಯಾಘ್ರಪಾದ ಗೋತ್ರಾಯ ಸಾಂಕೃತ್ಯ ಪ್ರವರಾಯಚ
ಅಪುತ್ರಾಯ ದದಾಮ್ಯೇತದ್ ಜಲಂಭೀಷ್ಮಾಯ ವರ್ಮಣೆ.

**ಮೇಳದವರು :—**

ಮೂಡಲಿಹನು ಭಾಸ್ಕರಾ
ಪಡುವಲಿಹನು ಚಂದಿರಾ.

**ಧರ್ಮ :—**

ಕಂಡುದೆಲ್ಲ ಕನಸು ಎಂದು ಈಗ ತಿಳಿದು ಬಂದಿದೆ
ನಿದ್ರೆ ಮರೆಯ ಬದುಕೆ ಬೇರೆ ಎಂಬ ಅರಿವ ತಂದಿದೆ.
ಮುಗಿಲಿಗೇಕೊ ಮೂರ್ಛೆ ಬಂದು ಕಣ್ಣು ಮುಚ್ಚುವಂತಿದೆ
ಕಣ್ಣು ಕುಕ್ಷಿ ಕಾಣ್ಕೆಯೊಂದು ದತ್ತಿನೆ ಇಗೊ ನಿಂದಿದೆ.

**ಮೇಳದವರು :—**

ಮೂಡಲಿಹನು ಭಾಸ್ಕರಾ
ಪಡುವಲಿಹನು ಚಂದಿರಾ.

**ವ್ಯಾಸ :—**

ಈ ಪ್ರಚಂಡ ಕಿರಣದಾ ಪ್ರಕಾಶದಲ್ಲಿ ಕಲ್ಪನೆ
ಅರ್ಥ ಮಾಡಿಕೊಳ್ಳುತಿಹುದು ಇದಿರಿಗಿದ್ದ ಸ್ವಲ್ಪನೆ

ಅಹಂ ಗ್ರಹಣ ಸರಿಯುತಿಹುದು ಇದಂ ಮುದ್ರೆ ಕಂಡಿದೆ
ಬಣ್ಣ ಬಣ್ಣದಾ ವಿಕಲ್ಪ ಬೆಳಕೇ ಒಳಗೊಂಡಿದೆ.

**ಮೇಳದವರು** :—

ಮೂಡಲಿಹನು ಭಾಸ್ಕರಾ
ಪಡುವಲಿಹನು ಚಂದಿರಾ.

**ಕೃಷ್ಣ** :—

ಭೂಮಿತಾಯಿ ನಡೆಯಿಸಿಹಳು ಸೂರ್ಯನಾ ಪ್ರದಕ್ಷಿಣೆ
ಅವಳ ತಾಪದಲ್ಲಿ ಇಹುದು ಅವಳ ತಪದ ರಕ್ಷಣೆ.
ಅವಳ ನೆರಳ ಬೆನ್ನಟ್ಟಿ ಆವಳಿಗಿರುಳ ತರುತಿದೆ
ಎಚ್ಚರದಾ ದುಡಿಮೆಯಲ್ಲಿ ದಣಿದು ನಿದ್ದೆ ಬರುತಿದೆ.

**ಮೇಳದವರು** :—

ಮೂಡಲಿಹನು ಭಾಸ್ಕರಾ
ಪಡುವಲಿಹನು ಚಂದಿರಾ.

**ಧರ್ಮ** :—

ಮರೆವಿನಾಳದಲ್ಲಿ ತಳವೊಳಿಲ್ಲೊ ಅರಿವು ಹೂತಿದೆ
ಕಾಯುತಿಹುದು ಫಲಿಸಲೆಂದು ಪಟ್ಟು ಹಿಡಿದು ಕೂತಿದೆ
ತೋರಲೆಂದು ಎತ್ತಿದಾಸೆ ಕಳಶದ ಕುಡಿ ಎತ್ತಿದೆ
ಮೌನದಲಿ ನವಭಾಷೆಯು ಮಾಂಗಲ್ಯವ ಬಿತ್ತಿದೆ.

**ಮೇಳದವರು** :—

ಮೂಡಲಿಹನು ಭಾಸ್ಕರಾ
ಪಡುವಲಿಹನು ಚಂದಿರಾ.

**ವ್ಯಾಸ** :—

ಯೋಗ ನಿದ್ರೆ ಗೈವ ಹರಿಗೆ ಶೇಷ ಶಯನ ಹಾಸನೇ
ಹೂವು ಬಾಡಲುಂಟು ತಾನಿರಸ್ತ ಗಂಧ ವಾಸನೇ
ಚಿತ್ರ ತೊಳೆದು ಹೋದರೇನು ನೆನವಿನೊಳಿದೆ ಆಕೃತಿ
ನಾಗರಿಕತೆ ಮುಳುಗಬಹುದು ಮೂಡಲುಂಟು ಸಂಸ್ಕೃತಿ.

**ಮೇಳದವರು :—**

ಮೂಡಲಿಹನು ಭಾಸ್ಕರಾ
ಪಡುವಲಿಹನು ಚಂದಿರಾ.

**ಕೃಷ್ಣ :—**

ನರನ ಪ್ರಕೃತಿ, ನರರ ವಿಕೃತಿ ಸ್ವೈರಲೀಲೆ ಬೆಳೆಸಿವೆ
ಕಳೆದುಕೊಂಡು ಬುದ್ಧಿಯನ್ನು ಜ್ಞಾನವನ್ನು ಗಳಿಸಿವೆ
ದ್ವಾಪರದಾ ಅಸ್ತಮಾನ ಕಲಿಯುಗವನೆ ತೆರೆದಿದೆ
ಅದರ ನೀಲ ಭಾಲದಲ್ಲಿ ಕೃತಕೃತ್ಯತೆ ಬರೆದಿದೆ.

**ಮೇಳದವರು :—**

ಮೂಡಲಿಹನು ಭಾಸ್ಕರಾ
ಪಡುವಲಿಹನು ಚಂದಿರಾ.

( ಉಚಿತ ಮಂಗಲ ಸಂಗೀತ ಪಾರ್ಶ್ವ ಭೂಮಿಯಲ್ಲಿ )

**ಮೇಳದವರು :—**

ನಮನ ಮಾಡುವೊಲು ಎವೆಗಳೆಳಿಸಿ ಕುಡಿ
ಬೆಳಗುತಿಹುದು ದೃಷ್ಟಿಽಽಽ.
ಓಂ ಓಂಽ ಜಯಕೃಷ್ಣ ಹರೇ,
ಓಂ ಓಂಽ ಜಯಕೃಷ್ಣ ಹರೇ.
ನಮೋ ಎನ್ನುತಿದೆ ಮನದ ಮಾತು ಮುಗಿ–
–ದಂತೆ ಸುಪ್ತ ಸೃಷ್ಟಿ.
ಓಂ ಓಂಽ ಜಯಕೃಷ್ಣ ಹರೇ,
ಓಂ ಓಂಽ ಜಯಕೃಷ್ಣ ಹರೇ.
ರವಿಯ ಕಿರಣಗಳು ನಮನ ಮಾಡುತಿವೆ
ಚತುಃಸಾಗರಕ್ಕೆಽಽ.
ಓಂ ಓಂಽ ಜಯಕೃಷ್ಣ ಹರೇ,
ಓಂ ಓಂಽ ಜಯಕೃಷ್ಣ ಹರೇ.

ಕಡಲ ನೀರು ದಿಂಡುರುಳಿ ಬರುತಲಿವೆ
ಜೀವದಾಗರಕ್ಕೆಽಽ.

ಓಂ ಓಂಽ ಜಯಕೃಷ್ಣ ಹರೇ,
ಓಂ ಓಂಽ ಜಯಕೃಷ್ಣ ಹರೇ.

ಮುಗಿಯಬೇಕು ತನು, ಮುಗಿಯಬೇಕು ಮನು
ಅರಳಬೇಕು ಅರಿವೂಽಽ.

ಓಂ ಓಂಽ ಜಯಕೃಷ್ಣ ಹರೇ,
ಓಂ ಓಂಽ ಜಯಕೃಷ್ಣ ಹರೇ.

ಹಿಗ್ಗ ಹರಹುವಾ ನೊಗ್ಗಯಾಗದಿರೆ
ಏತಕಂಥ ಇರವೂಽಽಽ?

ಓಂ ಓಂಽ ಜಯಕೃಷ್ಣ ಹರೇ
ಓಂ ಓಂಽ ಜಯಕೃಷ್ಣ ಹರೇ
ಓಂ ಓಂಽ ಜಯಕೃಷ್ಣ ಹರೇ
ಓಂ ಓಂಽ ಜಯಕೃಷ್ಣ ಹರೇ.

———

# ಕವಿಗೆ ಕಿವಿಗೊಡದಿಹರೆ ಎದೆಯುಳ್ಳವರು?

ಇರುವಿಗರಿವೇ ಮರೆವು, ಮರೆವಿಗೆ
ಅರಿವೆ ಇರುವಿನ ಪರಿಯು, ಈ ಪರಿ
ಹರಿವ ಇರುವಿನ ಅರಿವೆ ಹಿಗ್ಗಿನ
ಸಮರಸದ ಬಾಳು।

ಈ ಘನದ ನೆಲೆ ಪಿಂಡಗೊಂಡಿಹ
ಆ ಮಹತ್ತಿನ ಉಂಡೆ ಗರ್ಭೀ–
ಕರಿಸಿ ಮೊಗ್ಗಾಗಿಹುದು ಮನದುನ್ಮನದ ಬಯಲಿನಲಿ ॥ ೧ ॥

ಮನದ ಶೂನ್ಯ ಸ್ಥಿತಿಯು ಪೂರ್ಣದ
ವರ್ಣಗಳನಳವಡಿಸಿ ಪ್ರಾಣಕೆ
ಮಂತ್ರಮಾಲೆಯ ತೊಡಿಸಿ ದೇಹಕೆ ರೂಪು–
ಗೊಡುತಿಹುದು।

ಇದು ವಿರಾಟದ ಆಟ ಉತ್ತರ
ವೀರನಾ ಬಯಲಾಟವಲ್ಲವು
ಪ್ರಾಜ್ಞನಿಪ್ಪತ್ತಾರು ಪಕಳೆಯ ಕಮಲದರಳುವಿಕೆ ॥ ೨ ॥

ಒಂದರಲಿ ಎಂಟುಂಟು ಇಪ್ಪ–
–ತ್ತೇಳನೆಯ ಭೌತಿಕದ ಗಂಟಿನ
ಬಂಧಗಳೆ ಮನದಾಚೆ ಆ ಸಂಬಂಧ
ಪತಿಕರಿಸಿ।

ಮಹದ ಪದದಲಿ ಮನೆಯ ಹೂಡಲು
ಅತ್ತ ಘನವೋ ಇತ್ತ ಘನ ಎ–
–ತ್ತೆತ್ತು ಘನವೆನೆ ನರನ ನಾರಾಯಣತೆ ಮೆರೆಯುವವು ॥ ೩ ॥

ಮಾತು ಮಾತಿನ ಹೊತ ಬಯಲಲಿ
ಈ ಪದಾರ್ಥವೆ ಬದುಕು ಮಾಡಿದೆ
ಅದರ ರುಚಿಯನೆ ಹದವಗೊಳಿಸಲು
ಪಾಕ ಮಾಡುತಿವೆ ।

ಡಂಭಕದ ಮಾತೇಕೆ ಆಡಂ–
–ಬರದ ನಟನೆಯೆ ಬೇಕೆ, ಸಾಕೋ
ಆ ದಿಗಂಬರ ಭಾವ ಶಂಬರನಗರ ಸಂಹರಿಸೆ ॥ ೪ ॥

ಮಾತು ಭಾವದ ಕೀಲ, ರೂಪವು
ಸ್ಫುರಣ ಸ್ಫುರಣದ ಶೀಲ, ಛಂದವೊ
ಅಚ್ಚ ಸ್ವಚ್ಛಂದಕ್ಕೆ ಹೊದಿಸಿದ ಮೇಲುದದ
ತಾಲ ।

ಮೌನ ಬ್ರಹ್ಮದ ಭಾಲ ಪಟ್ಟದಿ
ಬ್ರಹ್ಮಲಿಪಿ ಬರೆದಿಹುದು, ಅದ ನಿ–
–ರ್ವಚಿಸಲೆಂದೇ ಧ್ವನಿಸುತಿದೆ ಭಾರತಿಯ ಟೇಂಕಾರ ॥ ೫ ॥

ಇಳೆಗೆ ಭಾರತ ಮಹಿಮೆ ಅವತರಿ–
–ಸುತ್ತಿರಲು, ಕನ್ನಡದ ಹೊಕ್ಕುರ–
–ಣೆಯಲಿ ಘನಸೋಪಾನ ರಚನೆಗೆ ಇಂಬು
ದೊರೆಕೊಳಿಸಿ ।

ಸಾವಿರದ ಕೊರಳಿಂದ ಹೊರಟಿದೆ
ತಾನ ತಾನ ವಿತಾನ ಸುಭಗತೆ
ಕವಿಗೆ ಕಿವಿಗೊಡದಿಹರೆ ಎದೆಯುಳ್ಳವರು ಅರುಳಿನಲಿ ॥ ೬ ॥

—·—·—

# ಪಂಟು

ಅಲ್ಲಿಂಕು ಇಲ್ಲಿಂಕು
ನಡುವಿಲ್ಲ ' ಲಿಂಕು '
ಬರಿ ಮಸಿಯ ಗೊಣ್ಣೆ,
ಪಿತ್ತ ಕೆರಳಿದ ಹಾಗೆ
ಮೂಕ— ಸನ್ನೆ.

ಒಪ್ಪಿಗಿಲ್ಲ ಮಾತು ತಿಳಿಯಲಿಲ್ಲ
ತಪ್ಪಿಗೇ ಬಣ್ಣ ಬಳಿದು
ಹೊಸದೆಂದು ತಿಳಿದು.
ಹೊಟ್ಟೆಯೊಳೆ ಕಣ್ಣು
ಹಿಂಭಾಗ ಮೂಗು
ಕಿವಿಯಿರುವ ಜಾಗದಲಿ
ಚೂಪು ಕೋಡು
ಕಾಲಾಯ್ತು ಬಾಲ
ಕೈಯಾಯ್ತು ಕೋಲು
ತಲೆಯ ಹೆಸರಿಲೆ ಒಂದು
ಮಣ್ಣ ಹೆಂಟೆ
ಇದು ಪಿಕ್ಯಾಸೋ–ಪ್ರತಿಮೆ.
ಗುದ್ದಲಿಯ ಹಾಕಿ
ಎಳೆ ಪಿಕಾಸಿ,
ಪಾತಾಳ ಅಗೆದಾಗ
ವೇತಾಳ ಬರಬಹುದು

ನಾಗರಿಕತೆಯು ಹಲವು ರುಂಡ ಮುಂಡ,
ಯಾವ ಸಂಸ್ಕೃತಿ–ಕೃತಿಯೊ
ಬರಿ ಅನಾರುಂಡ
ಭಂಡ ರಾಕ್ಷಸ ಮಿಂಡ
ಎಣ್ಣೆಗೊಂಡ
ಏನೊ ಮುದ್ರೆ, ಏನೊ ಚಿತ್ಕಾಟು
ಏನರ್ಥ ಹೊರಟರೂ
ಹುಸಿ ಸಪಾಟು.
ನಾಳಿನಾ ಬಾಳಿಗೇ ಅಡ್ಡಗಾಲು
ಇಂದಿನಾ ಬದುಕಿಗೇ ಮರುಸವಾಲು
ಹೆಣಗಳನೆ ಗುರುಮಾಡಿ ಶಿಷ್ಯಬಂಟ
ಬಿಸಿಲುಗುದುರೆಯನೇರಿ
ಹಾಳು ಪಾಳಿಗೆ ಹೊಂಟ !
ಹೊಡೆದ ಪಂಟ !

# ಯಾರ ಮೂರ್ತಿ, ಅವರ ಕೀರ್ತಿ?

ಜಾಣ ತನ್ನ ಚಾಣದಿಂದ
ಕಟೆಯುತಿದ್ದ ಕಲ್ಲ!
ಯಾರ ಮೂರ್ತಿ, ಅವರ ಕೀರ್ತಿ....
..............................
ಕಾಣದವನೇ ಕಲ್ಲ? ಕಂಡವನೆ ಬಲ್ಲ!
..............................

ಕನಸು ಮೋಸದ ಸಿಪ್ಪೆ—
ತಿರುಳು?
ಇರಬಹುದು ತಿಪ್ಪೆ!
ಒಟರುಗುಡುತಿದೆ ಕಪ್ಪೆ
'ಮಳೆ ತಂದ ಮಂತ್ರವೋ ತನ್ನ ಮಾಟ'
ರಾಕ್ಷಸನ ಮಾಲಿಕನು
ಭಕ್ಷ— ಭೋಜ್ಯ.
ನಮಗೆ ಬೇಕಾಗಿಹುದು; ಅನ್ನಛತ್ರ.
ಇದು ಪ್ರಜಾರಾಜ್ಯ.
ಮೇಲೊಂದು ಹುಡುಗಾಟ
ಇಲ್ಲವೇ ಹುಚ್ಚಾಟ
ಅನ್ನದಮಲಿಗೆ ಮುಖ್ಯ ನಿದ್ದೆ ಬೇಕು
ಮ್ಯಾಗ್ಝಿಮಮ್ ಗೋರ್ಕಿಯೇ ನಮ್ಮ ಆದರ್ಶ.
ಕನಸಿನಂತಹ ಸತ್ಯ ನಾಟಕವೆ ಇಲ್ಲ
ಎಚ್ಚರವೇ ನಮ್ಮ ರೋಗ

ಇರಬಹುದು ಔಷಧವು ಅದಕು ಎಲ್ಲೋ
ಬುರುಸುಗಟ್ಟಿದ ಯಾವ ಸೆಗಣಿಯಲ್ಲೋ
ಕ್ರಿಮಿಗೆ ಕ್ರಿಮಿಯೇ ವೈರಿ, ಕ್ರಿಮಿಯೆ ಮಿತ್ರ
ಇದು ಮುಖ್ಯ ಸೂತ್ರ
ಕೆಲಸವಾಯಿತೆ ಪೂರ್ತಿ—ಓ ಜಾಣ—ಮೂರ್ತಿ
ಕೊಳೆ ಇಲ್ಲ ಕಲ್ಲಿಗೆ
ಅದು ಮಣ್ಣ ಬಿರುಸು, ನೀರಿನಿಂದದನು ಒರೆಸು
ಆ ಮೇಲೆ ಕಣ್ಣು ಕೊರೆಸು.

# ಏನರ್ಥ ?

ಹೀಗೆಂದರೇನರ್ಥ ? ಶಬ್ದ ವ್ಯರ್ಥ— ! ಅಷ್ಟೆ ಅರ್ಥ !!
ಅರ್ಥ ಶಾಸ್ತ್ರದ ಕುಟಿಲ ನೀತಿಯೊಮ್ಮೆ
ಮಾನವೀಯತೆ ಬರಡು ಪ್ರೀತಿ—ಎಮ್ಮೆ :
ಕೋಣವೂ ಕರು ಹಾಕಿತೇ ? ನವ್ಯ— ನ್ಯೂಜು !
ಬದುಕಲೋ ಸಾಯಲೋ ಭೀತಿಯೊಮ್ಮೆ
ಅದು ಕೂಡ ಗೇಲಿ— ಮೋಜು.
ಹಾಗೆಂದರೂ ' ಈಸ್ಟು ' ಹೀಗೆಂದರೂ ' ವೆಸ್ಟು '
ರೂಸು— ದೇಶ
ಈಸ್ಟು—ವೆಸ್ಟಿಗೆ ಡಿಕ್ಕಿ; ಸಂಸ್ಕೃತಿಯ ಆಟ
ಬೇರೆ ಮಾತಿನ ಮಾಟ
ಭಿನ್ನ ವೇಷ.
ಆಗೋ ಅತ್ತ ಬುದ್ಧ ಬಿದ್ದ
ಯೇಸು ಸತ್ತೂ ಎದ್ದ
ಚೈನಾ ದೇಶದೊಳೀಗ ಪಂಚವಾದ್ಯ.

ಭೂಗೋಲವಿರಬಹುದು ತಾನಖಂಡ
ಭಂಡ ಅದಮಾಡಿಹನು ಪಂಚ ಖಂಡ
ಪಾಖಂಡಿಗೇಕಯ್ಯ ಐಕ್ಯನೀತಿ ?
ರಾಜಕೀಯದ ' ಸ್ಟೈಲು—ಸಭ್ಯ ರೀತಿ—
ಎಲ್ಲ ಬೊರ್ಡರಿನಲ್ಲಿ ಪೀಸು ಪೀಸು
ನಡುನಡುವೆ ಫಾಯ್ರಿಂಗು ಈಸು ಈಸು.
ವ್ಯಾಪಾರ ಮಾಡಿದರೆ ವಿನಾಯತಿ
ಇಲ್ಲವೋ ಐತಿ ಬಾ ಪಂಚಾಯತಿ !

———

# ಬೆಳಗು ಜಾವ

ಮರನಲ್ಲ ನಾನು— ನಾನು ಅಮರ.
ಕುಮು— ನಲ್ಲನಾಗಿ, ಆದೆ ಭ್ರಮರ.
ಮುಚ್ಚಿಲ್ಲ ನನಗೆ, ನಾನು ತೆರವು
ಬಿಚ್ಚು ಮಲಗಂಟು, ಅದುವೆ ಒಳನೆಂಟು.
ಅಂಟು ಇದ್ದರು ಅಲ್ಲ ಎಣ್ಣೆ ಜಿಗಟು.
ಇದು ಸ್ನೇಹದೊಗಟು.

ತುಂತುರು ತುಷಾರ
ಅದು ಹೃದಯ ಹಾರ
ಜಿನುಗು ಕಿವಿ ಮಾತು
ಜೀವ ರುಜುವಾತು
ಏನೊ ಎಚ್ಚರಿಸಿದೊಲು
ಏನೊ ಪಲುಕು
ಹಾಕು ಮೆಲುಕು
ವೈಮರೆವಿನಲ್ಲಿರುವ ಅರಿವೆ ತೇವ
ಅಲ್ಲಿ ಅಂಕುರಿಸುವದು ಜೀವಭಾವ
ಆ ಕ್ಷಿತಿಜದುದಯವೇ ಬೆಳಗು ಜಾವ
ಅದನರಿಯುದವ ಯಾವ ?

ಓಹೋ ನನ್ನಾಕೆ
ಜೋಕೆ, ಜೋಕೆ !
ನಾನು ನಿನ್ನಾತ
ನಾ ಮಲಯವಾತ.

———

# ಸಮುದಂಡಿಗೆ

ಇದು ಅಖಂಡ ಇರು ಅಖಂಡ
ಅಖಂಡ !
ಖಂಡನ ಮಂಡನ ಬರಿ ವಾಗ್ದಂಡನ
ಇರುವುದವರಿ, ಅರಿದೊಲು ಹರಿ
ಈ ಪರಿ ಪರಿಪೂರ್ಣ
ವ್ಯಾಕರಣದ ಪ್ರಕ್ರಿಯೆಯೋ
ಬರಿ ಮಾತಿನ ಚೂರ್ಣ
ತರ್ಕದ ಯುಕ್ತಿಯು ಕುಹಕವು
ಅವಿವೇಕದಜೀರ್ಣ
ಸಮುದಂಡಿಗೆ ಒಳಹೊರಗೂ
ಆಗುವದುತ್ತೀರ್ಣ.

ಮನದಾ ಮಂಡಿಗೆಯಿಂದಲೆ ಆದೀತೆ ಪ್ರಸ್ತ ?
ಪ್ರಾಣದ ನಿತ್ರಾಣದ ಪರಿ ಎಂದಿಗು ಸಂತ್ರಸ್ತ.
ಹೊಸ ಬೆಳಕಿಗೆ ಹೊಸ ಬದಕೂ, ಹೊಸ ಹೊಸದೇ ಹೊಸದು
ಹೊಸ ಚಿಗುರಿಗೆ ನೆಲೆಯಾಗಲಿ ತರಗನು ಬಿಡು ಎಸೆದು.
ಬರಡಲ್ಲವು ಕೊರಡಲ್ಲವು ಸ್ಥಾಣುವಿನಾಸ್ಥಾನಾ
ಹೊಸದನು ಕಾಣುವ ಕಣ್ಣಿಗೆ ಹಾಕಿದೆ ಅಂಜನವು
ಹೊರಬಣ್ಣದ ಬೆಡಗೇತಕೆ ಮುಸುಕಿನ ರಂಜನವು.
ಜೀವನ ಸಂಗೀತಕ್ಕಿದೆ ಬಹು ತಾನ ವಿತಾನಾ.

— — —

*

# ಲಾವಣ್ಯ

ಲವಲವಿಕೆಯಲಿ ಮಿಂಚಿ
ಮುಚ್ಚಾಟವಾಡುತಿಹ ಬಹು ರೂಪಿಯೇ ।
ಅಮೃತದಿರವೇ ನನ್ನ
ಮರೆವಿಲ್ಲದರಿವಿನಲಿ ಇಹೆ ಸೀಪಿಯೇ ॥

ನೆಕ್ಕಿದೆನ್ನನು ನಿನ್ನ
ವಿದ್ಯುತ್‌ಕಟಾಕ್ಷದಲಿ ಅಗ್ನಿರುಚಿಯೇ ।
ನಿನ್ನ ಕುಲುಮೆಯ ಕಾವು
ಇಲ್ಲ ಇಲ್ಲದ ಠಾವು ನಿತ್ಯ ಶುಚಿಯೇ ॥

ಕ್ಷಣವಿಲ್ಲದೀಕ್ಷಣವೆ
ಲವಮಾತ್ರ ಸ್ಪರ್ಶದಲಿ ನೀ ಹನಿಸುವೆ ।
ಹಸಿರಿಸುವೆ ಕುಸುರಿಸುವೆ
ಮರಣ ಮರಣದ ಮಧ್ಯೆ ನೀ ಜನಿಸುವೆ ॥

ಲಾವಣ್ಯದುರುಪಿನಲಿ
ಮನದ ಗಾಯವು ಮಾಯ್ತು ಗುರುತಾಯಿತು
ಏಸು ಮಾತನ್ನಾಡಿ
ಬಳಲಿದರು ಮೌನವೇ ಕುರಿತಾಯಿತು ॥

ನಿನ್ನ ಲವದಲ್ಲಿ ರವ
ನವನವತೆಯಲಿ ಧ್ವನಿಸಿ ಛಂದವಾಯ್ತು ।
ಕಲ್ಪಿಸಿದ ಕರುವಿನಲಿ
ಏನೊ ಎರಕವ ಹೊಯ್ದು ಅಂದವಾಯ್ತು ।

———

# ಚಮತ್ಕೃತಿ

ಭಸ್ಮವಾದರು ದೃಶ್ಯ
ಅಸ್ಮಿ ಎನ್ನುತ್ತಲಿದೆ
　　ಕಸ್ಮಾತ್? ಅಕಸ್ಮಾತ್ತೋ? ಸಾಕ್ಷಿ! ಹೇಳು.
ಯಾ ಅನಾಹತನಾದ
ಯಾವದೋ ಆಸ್ವಾದ
ಹೃದ್ಗ್ರಂಥಿಯಾವೋದ ಬಂತು ತಾಳು.
ಕ್ಷಣ ಕ್ಷಣ ಅಹಂ ವೃತಿಯು
ಆದರೂ ಆಕೃತಿಯು
　　ಸತ್ಯ ವಾಸನೆಯಂತೆ ಸುಳಿಯುತಿಹುದು.
ಆವಾಸ ರಹಿತವೋ
ಆಸ್ತಿಕ್ಯ ನಿಹಿತವೋ
　　ಪಾದ ಮೂಡದ ಹಾದಿ ತುಳಿಯುತಿಹುದು.
ಒಂದೆ ಎರಡಾಗುತ್ತ
ಎರಡೆ ಒಂದಾಗುತಿದೆ
　　ಬರಡೆ ಹಯನಾದಂತೆ ಹೊಳೆಯುತಿಹುದು.
ಕುರುಡಿಗೂ ಸ್ಪರ್ಶವಿದೆ
ಸತ್ತಿಗೆ ವಿಮರ್ಶವಿದೆ
　　ಉದ್ಭಿಜ್ಜದಂತೇನೊ ಮೊಳೆಯುತಿಹುದು.
ಓ ದೇವ ಕಿರಣವೇ
ಇಹ ಸಹಜ ಹರಣವೇ
　　ತಮವ ಛೇದಿಸಿ ದಾರಿ ದೀಪವಾಗು.
ಮಣ್ಣಿನಲೆ ಕಣ್ಣಾಗಿ
ಕಣ್ಣಿನಲೆ ಹಣ್ಣಾಗಿ
　　ಜ್ಯೋತಿ ರಸವೇ ರುಚಿ ಸಮೀಪವಾಗು.

—-—

# ಛಾಯೆ

ಏನುಂಟೋ ಅದನು ಅಲ್ಲಗಳೆಯಲು ಸಲ್ಲ.
ಇಹುದು ಇಲ್ಲೆಂಬ ವ್ಯಾಪಾರ ಉಂಟೆನ ಗಂಟು.
ಇಹುದು ಎಂಬುದು ದೃಶ್ಯ. ದೃಶ್ಯದಾಚೆಗೆ ಸಾರೆ
ಇಲ್ಲೆಂದು ಎನಿಸುವುದು. ರೂಪದಾವಿರ್ಭಾವ,
ರೂಪದ ತಿರೋಭಾವ. ರೂಪವೆಂಬುದು ವಸ್ತು;
ಅಸ್ತಿ ಎಂಬುದು ಭಾವ ಸದ್ವಸ್ತು ಸದ್ಭಾವಗಳ
ಗ್ರಂಥಿ ಗ್ರಥನವೆ ಗ್ರಂಥ. ದೇವಯಾನದ ಪಂಥ.
ಘನ ಘನಂಗಳ ಬಂಧ ಸಂಬಂಧದರಿವಿನಲೆ
ಹೊತ್ತು ಹೊತ್ತುತ್ತಲಿದೆ, ಹೊತ್ತು ಹೊಳೆಯುತ್ತಲಿದೆ.
ಆದರ ಗೊತ್ತೋ ಗುರಿಯೊ! ಅದುವೆ ಎತ್ತೋ ಎಲ್ಲೊ!
ಅದರ ಆಲಯುರಜನೆಗಾಗಿ ಲೀಲಾಯಿಸುತ
ಲಯಲಯವು ಪ್ರಲಯತನೆ ಪ್ರತಿಮುಖಿಸಿ ಏಳುತಿದೆ,
ಬೀಳುತಿದೆ, ಬಿತ್ತುತಿದೆ, ಎತ್ತುತಿದೆ ತಲೆ ಮತ್ತೆ.
ಇಂಥ ತಲೆ ಬಾಲದಲಿ ದೇಹವನು ತಾಳುತಿದೆ
ಆ ವಿದೇಹದ ಭಾವ “ ಓಂ ಭವತಿ ! ದೇಹಿ ಭಿ
ಕ್ಷಾಂದೇಹಿ ! ” ನಾ ನೇಹಿ, ನಾ ದೇಹಿ, ನಾ ಗೇಹಿ.
ಓ ಪುಷ್ಪಗರ್ಭೆ ಓ ಓಂ ದಿವ್ಯ ಸಂದರ್ಭೆ
ಅಪ್ರಕಾಶಿತವನ್ನು ಸುಪ್ರಕಾಶದಿ ಬೆಳಗಿ
ಇಲ್ಲ ಎನಿಸಿದುದನ್ನು ಅಹುದೆಂಬ ರೀತಿಯಲಿ
ಘನ ಪಿಂಡ ಮಾಡಿ ಮೂಡಿಸು ನಿನ್ನ ಮೋಡಿಯಲಿ
ಬೇರೆ ಸರ್ಗದ ಛಾಯೆ ಬಿತ್ತು ಈ ರೂಢಿಯಲಿ.

—·— —— —·—

# ಭಾವದೀಪ

ನೆಲವು ಕಾದು, ಅಂಗಾಲು ಕಾದು, ಮೈ ಕಾದು ಉರಿದು ನೆತ್ತಿ
ಬಿಸಿಲು ಎಣ್ಣೆಯಲಿ ಹೊತ್ತಿ ಆದೆ ನಾ ಬೆಂಕಿಗೊಂಡ ಬತ್ತಿ
ಕಣ್ಣು ಉರಿದು ಕೆಂಗೆಂಡವಾಗಿ ಭಗ ಭಗನೆ ಬಾನ ಭಾಗ
ನೆತ್ತಿಯಲ್ಲಿ ಸುಡುತಿದ್ದ ಸೂರ್ಯ ಕತ್ತೆತ್ತಿ ನೋಡಿದಾಗ.

ಮಣ್ಣು ನೆಲದ ಈ ಅನ್ನಪಿಂಡ ಉರಿಯಾಗೆ ಉಸಿರ ತಿದಿಗೆ
ಬದಿಗೆ ಹರಿಯುತಿದೆ ತಣ್ಣನೀರು ಸುಖವಾಗಿ ಸುಖದ ನದಿಗೆ
ನೀರಿನಲ್ಲಿ ಕಾಲಿಟ್ಟೆ ಮಾತ್ರ ನಾನಂದಿ ನನಗೆ ಹೊರತು
ಜಲಕ್ರೀಡೆಯಾಡುತ್ತಲಿದ್ದ ರವಿ ಕೂಡ ತಾಪ ಮರೆತು.

ತಂಪು ಜೊಂಪು ಏರಿತ್ತು ತಲೆಗು ಹುಟ್ಟಿತ್ತು ಕುಸುಮ ಕಂಪ
ನಾಡಿ ನಾಡಿ ಜುಣುಗುಡುತ ಬಂತು ನಾನಾಡೆನೋ ನಿಲಿಂಪ
ಯಾವ ನಾಡೊ ಇದು ಗಾಳಿ ತೀಡುತಿದೆ ಯಾರೊ ಹಾಡಿದಂತೆ
ಉಸಿರ ಪಂಜರವು ಭಗ್ನವಾಗಿ ನಾ ನಗ್ನನಾಗಿ ನಿಂತೆ.

ಏನು ದೇವ ! ಓ ನಾನು ದೇವ ಈ ಭಾನು ದೇವ ಸುಡನೇ
ಬಯಲ ಹಾರಹೊಡೆದಿರಲು ಬಯಲು ಬಯಲಾಯ್ತು ಬಯಲಿನೊಡನೆ
ಸುತ್ತಲೆತ್ತಲೂ ಸಮವು ತಮವು, ನಂದಿಸಿತು ನಂಜು ನೋವ
ಗಾಜುಗೋಳವಿಯಲಿ ದೀಪ ಬೆಳಗಿದೊಲು ಬೆಳಗುತಿತ್ತು ಭಾವ.

———

# ಕಾಣ್ಕೆ

ಸಾಕ್ಷಿಕ ಭೂಮಿಕೆಯೊಳಿಹ ನಿಲಿಂಪ
ಛಳಿಜ್ವರವಲ್ಲವು ಸಾತ್ತ್ವಿಕ ಕಂಪ
ಚೈತ್ಯ ಶಿಖೆಯೊಳಿದೆ ಶ್ರೀನಕ್ಷತ್ರ
ನಿರೀಕ್ಷಿಸುತ್ತಿದೆ ಸಾಹಸ ಕ್ಷೇತ್ರ
ಕರೆಯಬೇಡವೇ ಜೀವೋದ್ಗೀತಾ
ಅಪೂರ್ವ ಭಾವದ ನವನವನೀತಾ
ಹಣ್ಣಲ್ಲವು ಈ ಸ್ವಯಂಭು ಕಣ್ಣು
ಪರ್ವ ಪರ್ವ ನಿಷ್ಪೋಷಿತ ಗಣ್ಣು.
ಕಳಿತ ಪದಾರ್ಥವು ಕೊಳೆಯುವದುಂಟು
ಬೃಹದ್ವಸ್ತುವದು ಬೆಳೆಯುವದುಂಟು.

ಓ ಅಶ್ವತ್ಥಾ! ಎತ್ತಿಂದೆತ್ತಾ?
ನಡುವಿನಲ್ಲಿ ಇದೆ ನೀರಿನ ಮುತ್ತಾ!
ಮುತ್ತು ಮೂರ್ತಿಸಲು ಆಯಿತು ಮಗುವು
ಸ್ತಿಮಿತ ಅಸ್ಮಿತೆಯ ಸಸ್ಮಿತ ಜಗವು
ಆಚೆ ಈಚೆಗೂ ಚಾಚಿದ ಕೈಯ್ಯಾ,
ಕೆಳಗೂ ಮೇಲೂ ನೀಡಿದ ಮೈಯ್ಯಾ,
ಹಿಂದೂ ಮುಂದೂ ತೂಗುತ ನಿಂತೆ
ಒಳಗೂ ಹೊರಗೂ ತುಂಬಿರುವಂತೆ
ನಿಷ್ಫಲವಲ್ಲವು ನನ್ನೀ ಠಾವು
ಅರಿವು ಎಂಬುದಿದು ಅತ್ತಿಯ ಹೂವು.

ಆಶೀರ್ವಾದವು ನೀಡಿದೆ ಮೇಲೆ:—
ತಾಯಿಯ ತೊಡೆಯಲಿ ಕಲೆಗಳ ಶಾಲೆ
ನಿಃಶಬ್ದದ ಒಳ ತೊಟ್ಟಿಲೊಳಿತ್ತು
ನುಡಿಯದ ಸೊಲ್ಲನೆ ನುಡಿಸುವ ಗತ್ತು

ಊದಿ ತುಂಬುತಿರು ಅಂತಃಪ್ರಾಣ
ಅನಿರ್ದೇಶ್ಯದಲೆ ಮನೆಯನು ಕಟ್ಟು
ಬೀಡಾಡಿಯ ಚಂಚಲತೆಯ ಬಿಟ್ಟು
ಅರಸಗೆ ಬೇರೆಯ ಅರಮನೆ ಬೇಕೆ?
ಬೆಳಕಿನ ಕುದುರೆಗೆ ಬಣ್ಣಗಳೇಕೆ?

ಅಲ್ಲ ಅಲ್ಲವಿದು ಮೌನದ ಭಂಗ.
ನಾದ ತರಂಗಿಣಿ ನುಡಿಸು ಮೃದಂಗ
ಅಂಗೈಯೊಳಗೇ ಅಡಗಿದೆ ಬೆಟ್ಟ
ವಧುವಿನ ಸ್ಪರ್ಶಕೆ ವರ ತೆರದಿಟ್ಟ
ಪಾರ್ವನದಾರೋ ಪಾರ್ವತಿ ಯಾರೋ
ಕಾಣ್ಕೆಯ ನೀಡಲು ಮೇರುವನೇರೋ
ಬೆಡಗು ಎನ್ನದಿರು ಈ ಬಗೆಯಾಟ
ನೋಟವೆ ನೈಗೊಂಡಿರಿಯಾ ಮಾಟ?
ಮಾತಲ್ಲವು ಆಕಾಶದ ತೂತು
ಬೆರಗುಗೊಳಿಸುತಿದೆ ಬೆಳಕೇ ಹೂತು.

*

# ವಿತರ್ಕ

ಓ ಟರಕ–ಹರಕ
ಮನೆ ಮುರಕ.
ಜಿದ್ದು
ಹದ್ದನೊಪ್ಪದ ಹದ್ದು !
ಇತಿಯ ಮಿತಿ ಮೀರಿದ್ದು.
ಹೆಣದ ಊಟ.
ಕಾಟ, ಏರಾಟ, ಮಾಟ
ದಿಗಿಲು–ಭುಗಿಲು
ಸೇರುವದು ವಿಷಕಾರುವದು
ಕಾರಿದುದನೇ ನೆಕ್ಕಿ
ಬಿಕ್ಕಿ ಅಳುವದು
ಕರುಣೆ–ದಯೆ–ಧರ್ಮ––
ಇಲ್ಲವಲಾ ಎಂದು ಮೊರೆಯುವದು !
ಅಜ್ಞಾನಹಂಕಾರ ತೆಕ್ಕಿ–ಮುಕ್ಕಿ
ಬಾಳೆಲ್ಲ ಬಡಿದಾಟ.
ಮರಣ ಮುಕ್ತಿ.
ನಿನ್ನೆ–ಇಂದು–ನಾಳೆ
ಒಂದೆ ಸಿದ್ಧಿ.
ಸ್ಥಲ ಕಾಲ ಪಲ್ಲಟಿಸಿ
ಹೆಸರ ತಿದ್ದಿ.
ವರ್ತಮಾನವು ಎಂದು ಭೂತ ಭೌತದ ಸುದ್ದಿ
ಶೂನ್ಯಾಂತ–ಸಿದ್ಧಾಂತ–ವೇದಾಂತ
ಕೊರಳ ಗುದ್ದಿ.

ಅದು—-ಅಭಾವ.
'ನಮಗೆಲ್ಲರಿಗು ಒಬ್ಬನೇ ತಂದೆ—' ಅವನೇ ದೇವರೆಂದೆ!
ಅಣ್ಣ ತಮ್ಮರ ಬದುಕಿಗಾಗಿ ಕೊಂದೆ.
ನ್ಯಾಯ ಹೊಡಿಯೆ ಮುಂದೆ ಅನ್ಯಾಯ ತಂದೆ
ಅವರದಿವರದು ತಂದು—ನಾನೆ ತಿಂದೆ
ಹಿಂದೆ ಇಲ್ಲದ ಟರಕಗೇನು ಮುಂದೆ?
ಆ ಸಮಾಜು ಈ ಸಮಾಜು
ಕಡಿದಾಡಿ ಬಡಿದಾಡಿ ಹೊಡಿ ಸಲಾಹು.
ಆಗು ಬಾಜೂ
ಗಾಯಕ್ಕ ಪಾಯಕ್ಕೆ ಇದೆ ಮಲಾಮು.
ತಲೆ ಕೆಡಿಸಿಕೊಳ್ಳದಿರು,
ತಲೆಯ ಹಾಕಿ.
ಅಲ್ಲಿ ಇಲ್ಲ ಬಾಕಿ
ಹುಚ್ಚಲಾ! ಬಿಚ್ಚಲಾ
ಎದೆ ಕವಡುಗಂಟು
ಜೀವ ಜೀವಕ್ಕುಂಟು
ಬಾಳ—ನಂಟು.

———

# ನನ್ನ ಪ್ರಕೃಯಲ್ಲಿ ನೀನು

ನನ್ನ ಪ್ರಕೃತಿಯಲ್ಲಿ ನೀನು
ನಿನ್ನ ಪುರುಷ ಯಾವನೋ ?
ನಿನ್ನ ಕೇಳಿ ಕಳೆದುಕೊಂಡೆ
ಕಂಡು ಉಂಡ ಕಾವನೋ ?
ಕರುಳನೀಯಲಾರನೇನೋ
ಕರುಣಿಸುತ್ತ ಈವನೋ ?
ಕತ್ತಲಲ್ಲಿ ಆಟವಾಡಿ
ಕೆಣಕುವ ಯಾ ದೇವನೋ ?
ಅಲೆಯುತಿಹೆನು ಅಂತರಾಳ
ನಾ ವಿದೇಹಿ ಭೂತವೋ ?



# ಹಿಂದುಳಿದಿದೆ ಪಾದ

ಶ್ರೀ ಶಂಕರನಾಣೆ ! ಶಂಕರನೆಂಬುವ ಶಂಕರನಲ್ಲ.
ಅವನೋ ದೇವರ ಕಿಂಕರನು !
ಮಾಡುವ ಕೆಲಸವ ಮಾಡಲು ಬಂದ
ಆಡುವ ಮಾತುಗಳಾಡಿದನು
ನೋಡುವ ಪರಿಣತಿ ನೋಡಿದನು.
ಹಾಡುವ ಪ್ರಾರ್ಥನೆ ಮಾಡಿದನು :—
**“ ನ ಚೇದೇವಂ ದೇವೋ ನ ಖಲು ಕುಶಲಃ ಸ್ಪಂದಿತುಮಪಿ ”**
ಹಡೆದಾ ಹೊಟ್ಟೆಯ ಸಂಪದವೇನೋ ?
ಜನ್ಮ ಮುಹೂರ್ತದ ಮಾಂಗಲ್ಯ— ?
ಅಜಾತ ವಸ್ತುವು ಜನ್ಮವ ತಾಳಿತು
ಮಾಯಾಮಯದಲಿ ತಾನೂ ಬಾಳಿತು.
ಹೋ ಹೋ ಮಿಂಚಿತು ಕಾರ್ಯ.
ಎಲ್ಲಿಹನಾ ಆರ್ಯ.
ಕಾಣದಿಹವು ‘ ಶ್ರೀಪಾದ ’
ಹಿಂದುಳಿದಿದೆ ಪಾದ.

—·—·—

# ದೊಂಗಲುನ್ನಾರೂಽರೇ—ಜಾಗ್ರತಽ

ದೊಂಗಲುನ್ನಾರೂಽರೇ— ಜಾಗ್ರತಽ
ಎಚ್ಚರಿದೊಂದೇ ಆಗಲಿ ವ್ರತಾ || ಪಲ್ಲ ||

ಇನ್ನಾರು ನಿಮ್ಗಽಽ । ಎಚಾ್ರ ಕೊಡಾವ್ರಣ್ಣಾ
ಹಾದಿ ಐತೀ ಬಲೂ ಖಲೂ ದೂರಾ
ಗಂಟಽ ಬೀಳ್ತಾನ ಅಲ್ಲಿನೆ ಚೋರಾ
ಸಿದ್ವೀ ಬ್ಯಾಡ್ರೆಪ್ಪಾ, ಬಂದೀತು ಘೋರಾ || ದೊಂಗಲು....

ಕಳ್ಳಾ ಅಂಬಾವ । ಬ್ಯಾರೇ ಯಾರೂ ಇಲ್ಲಾ
ಅಂವಾ ನಮ್ಹಾಂಗಽ ನಿಮ್ಹಾಂಗಽ ಎಲ್ಲಾ
ಆದ್ರ ಧಂದೇನ ಮಾಡಿಕೊಂಡಾನ ಖುಲ್ಲಾ। ದೊಂಗಲು....

ಅಂದಾನು ಹೆದರ್ಬ್ಯಾಡೊ, ಹೆದರ್ಬ್ಯಾಡೊ ತಮ್ಮಾ
ಐತಿ, ರಾಜ್ಯಾನ ಇದು ನಮ್ಮ ನಿಮ್ಮಾ
ಬ್ಯಾರೆ ಬರ್ತಾರು ಯಾರು? ಮಕ್ಕೋ ಸುಮ್ಮಾ|| ದೊಂಗಲು....

ಇದ್ದವ್ರು ಹರಕೊಳ್ಳಾಕ ಇಲ್ದವ್ರು ಬರ್ತಾರ
ಇದ್ದದ್ದು ಇಲ್ಲದ್ದಾ್ಯವ್ದೋ ಯಣ್ಣಾ
ಮನಸ್ಯಾರಽ ಹೂಲೀ ಎಬಿಸಿ
ಮನಸ್ಯಾರ್ನ ತಿಂತಾರ
ದೇವ್ರುಽ ತೆರೀಬೇಕೋ ಕಣ್ಣಾ
ಮುಚ್ಚಿಕೊಂಡೈತಿ । ಅಂತಃಕರ್ಣಾ
ಕರ್ಣನ ಕಿಸೇಕಽನ ಹಾಕಾವ್ರು ಕನ್ನಾ
ಬಂದು ಎದ್ದೈತಿ ಅಲ್ಲಲ್ಲಿ ಹಾಹಾಕಾರ
ಸ್ವಾಹಾಕಾರಾನ ಬಲು । ದೊಡ್ಡ ಮಂತ್ರ ಆಗೈತಿ

ಬಂದೈತ್ಯೋ ಗೆಣೆಯಾ ಭಾಳ ಘೋರಾ
ಇಲ್ಲಿ ಪಾರಾದಾವ್ನಽ ಖರೇ ಶೂರಾ ॥ ದೊಂಗಲು....

ಅಂಬಿಕಾತನಯನಿಗು ಇತಿಮಿತಿ ಖಿದ್ದೈತಿ
ನೆಂಬಿಕ್ಯಾರೆ ಯಾರ್ದಪ್ಪಾ ಇಲ್ಲಿ
ಪೂಜಾರೀನಽ ಕೂತು । ದೇವರ್ನ ಕದ್ದರ
ಇನ್ನ ಫಜೀತಿ, ಬ್ಯಾರೆ ಯಾವ್ದೈತಿ ?
ಸೋದರರ ಭಾವಾ ಹೇಳೂವ
ಚೋದ್ಯರು ಚೋದರು ಮಾದರು ಕೂಡ್ಯಾರು
ಗ್ಯಾಂಗ, ಗ್ಯಾಂಗೀಽಗೆ ಬ್ಯಾರೆ ಹೆಸರೈತಿ
ಯಾಲೀ ಧೂಲಾ ಅಂತ, ಹೈದೋಸ ನಡಿಸ್ಯಾರ
ಮನಸ್ಯಾರ್ಕಿ ಒಳಗಽ ಕಸರೈತಿ
ಸಾಲಾಽ, ಸಾಲೀಽ ಅಂತ । ನೆಂಟಸ್ತಿಕ್ನ ಬೆಳಸ್ತಾರು
ಸೋದೇರು ಭಾನಚೋದ ಮಂದಿ । ಭಾಳ ಬೆರ್ಕಿ
ಅಲ್ಲಿ ತುರ್ಕಿ, ಇಲ್ಲಿ ತುರ್ಕಿ. ಹೊಡದಾರು ನಡವಽ ಗಿರ್ಕಿ
ತೂಕಡಿಸಬ್ಯಾಡೋ ಜೋಲಿ ತಪ್ಪಿ ॥ ದೊಂಗಲು....

ಮನಸ್ಯಾರ್ಹಾಂಗ ಕಾಣ್ತಾರಂತ
ಮನಸ್ಯಾರಽ ಅಂತ ತಿಳ್ದು
ನಿದ್ದೀ ಮಾಡಾಕ ಒಪ್ಪಿಗಿಪ್ಪಿ
ಹುಷಾರ್, ಹುಷಾರ್ । ಗೆಣೆಯಾ, ತಮ್ಮಾ, ಅಣ್ಣಾ
ಜಂಪು ಹತ್ತೀತು ತಪ್ಪೀಸಿ ಕಣ್ಣಾ ॥ ದೊಂಗಲು...

———

# ಅದೇ ಬಿಗಿ ಬಂದೈತಿ

ಊರೂರಿಗೆ ಚ್ಯಾ-ಪಾಣಿ
ತಂಬಾಕದ ಹೊಗೆಯು.
ಬತ್ತಲಾಟ ಕತ್ತಲಾಟ
ಸಿನೇಮಾದ ಸಂತೆ
ಹರಟಲಿಕ್ಕೆ ಠಾರ ಸುದ್ದಿ
ಹಿಂದೆ ಕುಂಟ ಬುದ್ಧಿ
ಹೇಸಿ ರೋಸಿ ಓಸಿಯಾಟ
ಕಳ್ಳ—ಭಟ್ಟಿ ಕುಡಿತ
ಸಿಲೋನ್ ಗೀತ ಕಿವಿಗೆ ಹಿತ
ಕೈಗೆ ಮೈಗೆ ತಾಲ.
ತುಡುಗರಾರೊ? ಲೋಭಿ ಯಾರೊ?
ಲಂಚವೆಂದರೇನೋ?
ನ್ಯಾಯ ಮತ್ತನ್ಯಾಯವೇನೊ?
ಹೊಡಿ ಮುಂದೆ ಗಾಡಿ
ಬೇಡ ಹಳೆಯ ರಾಡಿ
ಹೀಗಂದರು ತಪ್ಪು
ಹಾಗೆಂದರು ಬೆಪ್ಪು
ಬಂತಣ್ಣಾ ಪಂಚಾಯತಿ
ಇದು ಹಿಟ್ಲರ—ಹೆಜ್ಜಿ,
ಅವರವರಾ ಕೈಯಿಂದಲಿ
ಅವರಾ ತಲೆ ಜಜ್ಜಿ
ಬಲಿ ಬಂದನು ಕಲಿ ಬಂದನು
ಸತ್ಯಾಗ್ರಹವೆಂದು

ಆ ಸತ್ಯವು ಎಲ್ಲಿತ್ತೋ
ಆಗ್ರಹವೇ ಕುಣಿದಿತ್ತು
ನವ ಅಶ್ವತ್ಥಾಮ.
ದುರ್ಯೋಧನನೂ ಸತ್ತನು
ದುಃಶಾಸನ ಸತ್ತ
ಅಪಶಕುನದ ಶಕುನಿಯದೋ
ತಾನೂನೂ ಸತ್ತ
ಎಲ್ಲರಿಗಾಗಿಯು ಕರ್ಣನು
ತಾನೊಬ್ಬನೆ ಅತ್ತ.

ಲೌಡ ಸ್ಪೀಕರ ಕೇಳಿ ಲಂಬ ಕರ್ಣ
ಮುಗಿಲಿಗೇ ದನಿ ಎತ್ತಿದೆ.
ಹೇಳಿದ್ದೇ ಹೇಳಬೇಕು
ಕೇಳಿದ್ದೇ ಕೇಳಬೇಕು
ಸಂಸಾರ ಹೀಂಗೈತಿ
ಸಾರ್ ಐತಿ
    ಗಟಾರ್‌ನೂ ಐತಿ
    ಯಾರಿಲ್ಲಂದಾರು.... ?
        ಆದೇ ಬಿಗಿ ಬಂದೈತಿ.

———

# ಛಂದ-ಬಂಧ

ಛಂದವನರಿತು, ತಂತ್ರವ ಬಳಸುವದೇ ಬಂಧ.
ಇದೆ ಬಾಳಿದ ಸಂಬಂಧ.
ಬೇರಿಲ್ಲವೊ ಮುಕ್ತಿಗೆ ಯುಕ್ತಿ.
ವಿಭಕ್ತಿಯಲ್ಲಿಯೆ ವಾಕ್ಯದ ಭಕ್ತಿ
ಅದು ಭಗವಂತನ ಶಕ್ತಿ
ಬಾ ಬಂಧು
ನಾನೂ ನೀನೂ ಒಂದು
ಬದುಕುವರೇ ಕೊಂದು ?
ಸಾವಾರಿಗೆ ಇಲ್ಲ ?
ರೂಪ ವಿಕಾರವು ಹಲವು ಪ್ರಕಾರ
ಅಳಿವಿನತ್ತ ಬೆಳೆಯುವದೊಂದಂದ
ಉಳಿವಿನಲಿದೆ ಇರವಿನ ಅರಿವಿನ ಚೆಂದ
ಕಟ್ಟಿಗೆ ಬೆದರಿ, ಮುರಿಯದಿರಣ್ಣ.
ಮೈಮುರಿದೇಳುತ್ತಿದೆ ಭೂಮಿಯ ಬಣ್ಣ.
ಕಾಣದೆ ಕಣ್ಣ ?

ಹಸಿರಲ್ಲಡಗಿದೆ ನೆಲದೆದೆ ಹಸಿರು.
ಬಾನಿನ ನೀಲಿಯೊಳಿದಿದೆ ರವಿಯುಸಿರು
ಆ ಕಾವಿನಲೆ ಹುಟ್ಟಿದೆ ಕಾಮ.
ರತಿಯಿಲ್ಲದೆ ಎಲ್ಲಿದೆ ಪ್ರೇಮ ?
ಶಿವಗೌರಿಯ ನೇಮ.
ಸತಿಯಿಲ್ಲದೆ ಪತಿಯಿಲ್ಲ,
ಸಂತತಿಯಾ ಗತಿಯಿಲ್ಲ.

ಬಂಧದೊಳಿದೆ ಸಂಬಂಧ
ಸಹಜೀವನ ಸಖಭಾವನ
ಇದೆ ಸಭ್ಯರ ರೀತಿ
ಕುಂಟಲಿಯರ ಕುಟಿಲತೆಯಲಿ
ಮೂಡುತ್ತಿದೆ ಭೀತಿ.
ಹೃದಯಕ್ಕೆದೆಯನು ತೆರೆವುದು
ನಿರ್ಮಲತೆಯ ನೀತಿ
ಛಂದವು ಬಂಧವು ಕೂಡಿದೆ
ಮುಕ್ತತೆಯೂ ಗೀತಿ.
ಸಮತೂಕತೆ ಎರಡಾಗಿದೆ
ಒಂದಿರುವಾ ಜಾತಿ
ಕರಡಾಗಿದೆ ಬರಡಾಗಿದೆ
ರಸರಹಿತಾ ಪ್ರೀತಿ.

———

# ಅನುಭವ

ಆಚೆಗಿತ್ತು—ಏನೋ !
ಈಚೆಗಿದ್ದೆ,—ನಾನೋ !

ಇತ್ತು, ಇದ್ದೆ—
ಸುತ್ತುನಿದ್ದೆ :
ನಿಸ್ತರಂಗ ಭವವೊ ?
ಇದೇ ನವೋ ನವವೊ
ನೆನೆವಿನಂತೆ ಕಂಪಿಡುತಿದೆ
ಭವದ ಹಿಂದೆ ಅನುಭವ
ಕೌತುಕಕ್ಕೆ ಕಣ್ಬೆರೆದವೋ
ಅನಿಸಿಕೆ ಇದೆ ಲವಲವ.

———

## ' ಸೀನ-ಸೀತ '

ನೀವೆ ಹೇಳಿರಿ ಇದು ಯಾವ ಸೀನು ?
ನಮ್ಮಕ್ಕ ಬಲು ನವೀನು — ನಾವೆಲ್ಲಃ !
ಓ ! ಇದು ಹಳೆಯ ಜೊಲ್ಲು
ಆದರೂ ಈ ಸೊಲ್ಲು
ಅಲ್ಲ—ಗುಲ್ಲು—

* * * *

ಪ್ರಾಸ ಜೋಡಿಸಬೇಡ
ಹೊಡಿ ಮುಂದೆ ಗಾಡಿ
ಊರ ಮುಂದಿದೆ ಹಳ್ಳ
ಅಲ್ಲಿ ತೊಳೆ ರಾಡಿ !

* * * *

ನೆಗಡಿ ಜೋರಾಗಿತ್ತು
ಮೂಗು ಬಿಗಿ ಹಿಡಿದು
ಮನೆಗೆ ಬಂದವ ಸೀನನು
ಅವನೆದುರು ಅವನ ಹೆಂಡತಿ ಸೀತಳು— !
ಒಂಟಿ ಸೀತಳು—ವಿರಹ ಕಾಲವನು
ಕುಂಟಿಗೋ ಕೂರಿಗೋ ಹಲಹಲ ಎಂದು.
ಕಳೆದು ಕಂಡದ್ದಾಯ್ತು ಬೆಳುದಿಂಗಳು
' ಆನೆ ಸೀನದು ' ಎಂದು ತಾ ಬುದಿಂಗನೆ ಬಂದು
ಎದುರು ನಿಂದಿರೆ ಕಂಪ !
ಖಂಬ—ದೀಪಸ್ತಂಭ !
ಸೀತಳಿಗೆ ಶೀತ ವಿಪರೀತ

ಆದರೂ ಜ್ವರವು---ಕಾವು
‘ ಸೀನ–ಸೀತ ’
ಇಬ್ಬರೇ ಇಬ್ಬರು ತಾವು
ಆದರೆ, ಸೀನನೇ ಸೀತ
ಒಂದು ! ಎರಡು !
ಇದು ಕ್ಷೇಮ—ದಾಂಪತ್ಯ ಮಿಲನದ ಯೋಗ
ಜರ್‍ರನೇ ಜ್ವರವಿಳಿದು
ತಪತಪನೆ ತೊಳೆದು ಹೋಯಿತು ತಾಪ
ಪಾಪ !
ಭೀತ ಸೀತಳ ಮೈಯ್ಯು ಹಗುರಾಯ್ತು
ಶೀ—ನೀ ! ?
ಎಂದು ಒಡನುಡಿದಿತ್ತು
ಉಸಿರಿನ ಧೂಪ.

———

# ಇದ್ದಾಂಗ ಇತ್ತು ಎಲ್ಲಾ

ಬೆಳ್ದಿಂಗ್ಳ ಬಿದ್ದಿತ್ತು ಅಂಗಳ ತುಂಬ
ಅಂಗಳ ತುಂಬಿತ್ತು ಬೆಳ್ದಿಂಗ್ಳದಿಂದ
ಇದರಾಗ ಅದೇ ಬಿತ್ತೋ
ಅದೇನೆ ಇದರಾಗಿತ್ತೋ.

ಕನಸಿನೊಳಗೆ ನಾನಿದ್ದೆ
ಅಲ್ಲೆ ನೀನು ಹೊರಬಿದ್ದೆ.
ರೆಕ್ಕೆಯಾಗಿ ಬಯಲಾಗ
ಹುಡುಕಾಡಿದೆ.

ನನ್ನೊಳಗ ಕಂಡೆನೇನೋ
ಕಂಡೊಳಗ ಇದ್ದೆನೇನೋ
ಇದ್ದಾಂಗ ಇತ್ತು ಎಲ್ಲಾ
ಇದ್ದಲ್ಲೆ ಅಲ್ಲೆ.

ತಿಳಿನೀರ ತಳಾ ಕಂಡು
ತಿಳಿದಿದ್ದೆ ನಾನು ಬಲ್ಲೆ—
ಎಲ್ಲೆ ನೀರ? ಎಲ್ಲಿ ನಲ್ಲೆ?
ಅನುಭವದ ಕಲ್ಪದಲ್ಲೆ
ಅಂದುಕೊಂಡಿದ್ದೆ.

ಸತ್ಯದ ನೆರಳೊಂದು
ಸುಳ್ಳೀನ ತಿರುಳಿನ್ಹಾಂಗ
ಮೆರಿದಾಡತಿತ್ತು ನಾನು
ಹರಿದಾಡಿದಾಗ.

ತೋರಿಧಾಂಗ ಹೊಳೀತಽದ
ನೋಡಿದಾಗ ಮೂಡಿ ಭಾವ
ಮೂಢ ಭಾವ ಅಂದರೇನೊ
ತಿಳಿಯದ ಮಾತು.

# ಬಾ ಬೇಗ

ಓ ಮೇಘರಾಜ ಘನ ವಿದ್ಯುಲ್ಲತಾ ತೇಜ
ಓಜೆಗುಂದಿದನಿಂದು ರವಿರಾಜ. ಆ ಗ್ರೀಷ್ಮ
ಭೀಷ್ಮ ಭಾಸ್ಕರತೆ ಎಂದೋ ಮುಸಳಿ, ನೀ ಬಂದೆ
ತಂದೆ ಜೀವನದಾಶೆ, ಕೃಷಿಕರೀಕ್ಷಣದಲ್ಲಿ
ಸ್ಫುರಿಸೆ ಚಾತಕ ಭಾಷೆ, ರಿಕ್ತ ಧ್ವನಿಯಾಗಿ ಗ–
–ರ್ಜಿಸಬೇಡ; ಸುಪ್ತ ಬೀಜವು ಬೇಡದೇನೊ ಜೀ–
ವನ ಮೋಕ್ಷ, ಆಗೊ ಅಲ್ಲಿ ಏಕಾಕ್ಷ ದಾಂಪತ್ಯ
ಕರೆಕರೆಯೊಳೇಕೊ ಕರೆಯುತ್ತಿಹುದು ಬಾ ಬೇಗ.

ಓ ಘನವೆ ಜೀವನನೆ ಅಂತರಿಕ್ಷದೊಳಿಂತು
ಸಾತ್ವಿಕನ ತೆರದಿ ಸಂಚರಿಸುವರೆ? ಇಳಿಯಣ್ಣ;
ಕ್ಷೇತ್ರವಾಗಲಿ ಫಲ ರುಚಿರ ಗಾತ್ರ ಸತ್ಪಾತ್ರ
ಬಾಂಬೊಲದಿ ಬರಿದೇನು ಇಂದ್ರಚಾಪದ ಬಣ್ಣ.

ದೃಶ್ಯಕು ಅದೃಶ್ಯಕ್ಕು ಕೊಡುಕೊಳೆಯು ಚೆಂದ
ಜೀವಕು ಅಜೀವಕ್ಕು ದ್ವೈವಿಕವೆ ಬಂಧ.

---

# ಜೀವಸ್ಪರ್ಶ

ಇರುವು–ಅರಿವಿನಾ ಹರವೆ ನಮ್ಮ ಕಱುವಾಗಿ ತಾಯಿಯಾಗಿ
ಮೂರನೊಂದರಲಿ ಪಿಂಡಗೊಳಿಸುವಾ ಗುರುವೆ ಬಾಯಿಯಾಗಿ.
ಸೀಮವನ್ನು ನಿಸ್ಸೀಮದೊಡನೆ ಹುದುಗೊಳಿಸಿ ಮಾಯಿಯಾಗಿ
ಜೀವ–ಪುಷ್ಪದೊಳೆ ಫಲಿಸೆ ಪಕ್ವತೆಗೆ ಬರಲಿ ಕಾಯಿಯಾಗಿ ||

ಕಾಯ ಕಾಣುವದು ಜೀವ ನೋಡುವದು ಭಾವ ತೋರಲುಂಟು.
ಬೇರೆ ಬೇರೆ ಈ ಪಸರ ಬೆಳೆದರೂ ಐಕ್ಯ ಬೇರೊಳುಂಟು
ಸಮತೆ ಕಾಯುವಾ ಮಮತೆಯೊಂದು ಒಟ್ಟೊಟ್ಟು ಮೂರೊಳುಂಟು.
ಒಂದರಲ್ಲಿಯೆ ನೂರು ಸಾಸಿರದ ಲಕ್ಷ ಕೋಟಿ ಗಂಟು ||

ತನುವಿನಲ್ಲಿಯೇ ತನ್ನತನದ ನೆಲೆಯಾಗಲೆಂದೆ ತಾನು
ತೊಗಲು ಮೈಯ್ಯೊಳೇ ಅರಿವು ಸುರಿಯುವದು ಆಗಿ ಹೋಗಿ ಸಾನು.
ಬಾನೆ ಹೊಲವಾಗಿ ಬೆಳಕಿನೊಲವಾಗಿ ಬೀಜನಾದ ಭಾನು.
ಭಾವರಾಣಿಯೋ ಜೀವ ಜಲವನೇ ಮಾಡುತಿಹಳು ಜೇನು ||

———

# ಯಾರೇ.... ?

ಇದು ಕಲಿಕಿಯಲ್ಲ,
ಏನೋ ಬೆರಿಕಿ
ಅಲ್ಲಲ್ಲಿ ತುರಿಕಿ ಬಂದಽದ ಮುಂದ
ಇರಬೇಕು ಏನೊ ಇತಿಹಾಸ ಹಿಂದ.

ಹೀಂಗಾದರ ಹ್ಯಾಂಗ ಅನಬ್ಯಾಡ
ಇದ್ದಾನ ಶಿವಾ ಮ್ಯಾಲ
ಶಕ್ತಿ ಆಟಂತ
ಭಲೆ ಭಲೆ ಜನರು ಮುಣುಗ್ಯಾರ
ಶಿವ ಶಿವಾ ಕೊನಿಗೆ ಅಂದಾರ.

ಈ ಸೆರಗು ಹರಕೊಂಡ ಸಗತಿ
ಬಾಳೆ ಬಿಟ್ಟೈತಿ
ಇದಕಿಲ್ಲ ಕೊರಳ ಗುಳದಾಳಿ
ಬೆಂದಿಲ್ಲಿದರ ಬ್ಯಾಳಿ
ಬೀದಿ ಗೂಳಿ ಬೆನ್ನ ಹತ್ತೈತಿ
ಇದರ ಕೊನೀ ಗೊತ್ತೈತಿ.

ಶಿವದಾಗ ಕಟ್ಟೈತಿ ನಮ್ಮ ಮನಿ
ಶಕ್ತಿ ಅಲ್ಲೆ ಸನಿ.
ಕೆಲವರ ಗುಡಿಸಲು ಶೂನ್ಯದ ಬಯಲಾಗ
ಅವರವರ ಸತ್ಯ ಅವರವರ ಪಾಲು.

ಕೂಡಿರತದ ಹಾಲೂ ನೀರು
ಹಂಸಕ್ಕ ಗೊತ್ತು ಆ ಬೇರು
ಮಲ ಬ್ಯಾರೆ ಕಮಲ ಬ್ಯಾರೆ
ಯಾರೇ ಇರಲಿ ಅದು ಯಾರೆ ಯಾರೆ ಯಾತೆ.——

———

# ರಿವಿರಬೇಕು

ಹುಳವೇ ಸಾಕಾಗಿತ್ತು
ಯು ಯಾಕಾಗಿತ್ತು ?

ಆದರಾ ಸುಂಕಾ—
ಇದರೀ ಬಿಂಕಾ—
ಮೈ ಮೈಗೂ; ಹೂ ಹೂವು ಹೂವಿಗೂ.
ಅನುಭವಿಸಿದ ಮನ ಮರೆತಿತೇನು?
ತುರಿಸಿದ ಹಾಗೆಯೆ ತೀರದ ತುರಿಯು.

ಯಾ ಮಳೆ ಹನಿಗೇ ಹುಳ ಹುಟ್ಟಿತ್ತು.
ಬೇರೆಯುದಕ್ಕೋ ಕಟ್ಟಿತು ಮುತ್ತು.

ಪಾತರಗಿತ್ತಿಗೆ ಹೂವಿನ ಮುತ್ತು;
ರಾಣಿಯ ಕೊರಳಿಗೆ ಸಿಂಪಿನ ತುತ್ತು;

ಕಂಬಳಿ ಮುಸುಕಿನೊಳೇನೇನಿತ್ತೋ
ಕುಣಿದಾಡುವ ಹುಳ ಹೊರಬಿದ್ದಿತ್ತು.

ಹುಳ ಹುಟ್ಟಿಸುವಾ ಕಾಲಪ ನೂಕು
ಹುಳವ ಹೊಡೆಯುವಾ ಬಿಸಿಲೂ ಬೇಕು.

ಬಾನಿಂದಲೆ ಹಸಿ, ಬಾನಿಂದಲೆ ಬಿಸಿ.
ನೆಲದ ಬೀಜಗಳಿಗಡೆ ಬಯಲು.

ಬೆಳೆಸುವ ಬಯಕೆಗೆ ಅರಿವಿರಬೇಕು.
ಸಾವನು ನೂಕದು ಹುಸಿ ಹುಯಿಲು.

———

# ಗಣಪತಿರಾಯಾ

ಜಯದೇವಾ ಜಯದೇವಾ ಶ್ರೀ ಗಣಪತಿರಾಯಾ
ಭಯಕಾರಕ, ಭಯಹಾರಕ, ಓಂಕಾರ ಕಾಯಾ ॥ ಜಯದೇವಾ ॥

ಜಗದಂಬೆಯ ಮೈಮಣ್ಣಲಿ ಮೂಡಿದ ಮೂರುತಿಯೆ
ಮೃಗಧರ ನೋಡಿದ, ಮಾಡಿದ ಬೇರೆಯ ಆಕೃತಿಯೇ
ಚಿಗುರಾಗಿದೆ ನಿಂನಾಲಿಗೆಯಲಿ ದಿನ–ದಿನ ಪ್ರತಿಯೇ
ಹಗಲಾಯಿತು ನಿಂನೆನಪೇ, ಸುಳ್ಳಾಯಿತು ಮೃತಿಯೇ॥ ಜಯದೇವಾ ॥

ಗಣನಾಯಕ, ಕವಿಗಾಯಕ, ಜನತ್ರಾಯಕ ಸಿರಿಯೇ
ಗುಣವರ್ಧಕ, ಖಲಮರ್ದಕ, ಸುರಸ್ಪರ್ಶಕ ದೊರೆಯೇ
ಅಣು ಅಣುವೂ ತೃಣರೇಣುವು ಗುಣಗಣವೆಂದರಿಯೇ
ಕ್ಷಣ, ಕ್ಷಣವೂ ನಾ ಸಿದ್ಧನು ನಿನ್ನೊಂದಿಗೆ ಬೆರೆಯೇ ॥ ಜಯದೇವಾ ॥

ಮೋದಕ ತುಂಬಿದ ಬಸಿರಲೆ ನಡಿಸಿರುವೆಯೊ ನೃತ್ಯ
ಬೋಧಕ ದೃಷ್ಟಿಯು ಬರವುದು ಮೌನದ ಸಾಹಿತ್ಯ
ಶೋಧಕ ದೃಷ್ಟಿಯ ಸೃಷ್ಟಿಯು ನಿನ್ನದೆ ಶತಕೃತ್ಯ
ನಾದದ ಮೂಲ ಸ್ವರೂಪವೆ ನಾ ನಿನ್ನಯ ಭೃತ್ಯ ॥ ಜಯದೇವಾ ॥

—·—

# ಹೇ ರಖುಮಾಕಾಂತಾ

ಶ್ರೀ ವಿಠ್ಠಲ ಜಯವಿಠ್ಠಲ ಹೇ ರಖುಮಾಕಾಂತಾ
ಭ್ರಾಂತಿಯು ಹರಿಯಲಿ ನಮ್ಮದು, ಅಕ್ಷಯ್ಯ ಶಾಂತಾ || ಜಯದೇವ ||

ಚಂದ್ರಭಾಗೆಯು ಬಂದು ಕೂಡಲು ಭೀಮೆಯನು
ಅಲ್ಲಿ ಕಟ್ಟಿದೆ ನಿನ್ನ ಭಕ್ತಿಯ ಸೀಮೆಯನು
ಭಕ್ತರಿಗಾಗವತರಿಸಿದೆ ನೀನೋ ನಿಃಸಂಗ
ಮಾನವರೊಳು ಕಂಡರು ನೀ ನಿಂತಿಹೆ ಅಭಂಗ || ಜಯದೇವ ||

ಭೇದಾಭೇದವೆಂದು ವಿರೋಧವು ಎದ್ದು
ಸಮಷ್ಟಿ ಒಡೆದಿದೆ ದ್ವೇಷವೆ ಗೆದ್ದು
ವ್ಯಕ್ತಿ ಭಕ್ತಿಯ ದೃಷ್ಟಿಯಿಂದ ಜೋಡಿಸುವೆ
ಕರ್ಣಾಟಕ, ಮಹಾರಾಷ್ಟ್ರವ ಒಂದು ಗುಡಿಸುವೆ || ಜಯದೇವ ||

ನಿನ್ನ ನಾಮದಲ್ಲೂ ಭಕ್ತರದೇ ಕೀರ್ತಿ
ನಿನ್ನ ಧ್ಯಾನದಲ್ಲಿ ಜೀವನ ಸ್ಫೂರ್ತಿ
ನಿನ್ನ ದರ್ಶನದಲ್ಲಿ ಕಂಡೆವು ಸುಖಧಾಮ
ನಿನ್ನ ಯೋಗದಲ್ಲಿ ಸಂಸಾರ ಕ್ಷೇಮ || ಜಯದೇವ ||

---

*

# ನ್ಯಾಯ—ಕಟ್ಟಳೆ

ಎಲ್ಲೊ ನ್ಯಾಯ—ಕಟ್ಟಳೆ
ನಡೆದು ವರ್ಷಗಟ್ಟಲೆ
ಅನ್ಯಾಯಕೆ ನಿಂತಿತು
ಮತ್ತೆ ಮುಂದೆ ಹೋಗಬೇಕು
ಅದೇ ನ್ಯಾಯ ಸಾಗಬೇಕು
ಯಮಧರ್ಮನ ವರೆಗೆಯೂ
ಝುಗ್ಗು, ಭುಗ್ಗು—ಬಗ್ಗು ಕುಗ್ಗು
ಅಲ್ಲಿ ಇಲ್ಲಿ ಸುಳಿವ ಹಿಗ್ಗು
ಸದಾಕಾಲ ಡೊಗ್ಗು ಡೊಗ್ಗು
ಎನುತಿದೆ ಆ ಪಲ್ಲವಿ
ಝುಗ್ಗು, ಭುಗ್ಗು; ಝುಗ್ಗು ಭುಗ್ಗು
ಹಿಂದೆ, ಇಂದೆ, ಮುಂದೆ
ಗತಿಯೊಂದೇ, ಬಂದೇ
ಹೊಗುವ ಮುಂದೆ ಮುಂದೆ
ಮರಳು ಮತ್ತೆ ಹಿಂದೆ,
ನಮ್ಮ ಸ್ಥಿತಿ ಕೆಟ್ಟಿದೆ
ಗತಿ ದುರ್ಗತಿಗಿಳಿದಿದೆ.

———

# ಜೋ-ಅರಿವು

ಮಾಟ, ಮಾಟ, ಇದು ಯಾವ ಆಟ
ಈ ಬಟಾ ಬಯಲಿನಲ್ಲಿ.
ಅಚ್ಚ ಅರಿವು ಬರಿ ಬಚ್ಚ ಅರಿವು
ಹೊಸ ಹೊಚ್ಚ ಅರಿವಿನಲ್ಲಿ.

ಆರೆ ಅರಿವಿನಲ್ಲಿ ಮರೆ ಅರಿವಿನಲ್ಲಿ
ಹೊರ ಅರಿವಿನಲ್ಲಿ ನೀನು
ತೆರೆ ಅರಿವಿನಲ್ಲಿ ಬರೆ ಅರಿವಿನಲ್ಲಿ
ಕೊರೆ ಅರಿವಿನಲ್ಲಿ ನೀನು.

ಮುರಿವರಿವಿನಲ್ಲಿ ಮೆರೆವರಿವಿನಲ್ಲಿ
ನೆರೆವರಿವಿನಲ್ಲಿ ನೀನು
ನುರಿವರಿವಿನಲ್ಲಿ ನೊರೆವರಿವಿನಲ್ಲಿ
ತೊರೆವರಿವಿನಲ್ಲಿ ನೀನು.

ನೆಲದರಿವಿನಲ್ಲಿ ನೀರರಿವಿನಲ್ಲಿ
ಉರಿವರಿವಿನಲ್ಲಿ ಅನಿಲ
ಬಾನರಿವಿನಲ್ಲಿ ತಾನರಿವಿನಳ್ಳಿ
ಹರಿವರಿವಿನಲ್ಲಿ ಅನಲ.

ಅನಲ, ಅನಿಲ ಸಂಯೋಗದಲ್ಲಿ ಗೋ–
–ಪುರವ ಕಟ್ಟಿ ಅರಿವು
ಮರೆವಿನೊಂದು ಮರೆಯಲ್ಲಿ ಮನೆಯ
ಕಟ್ಟಿಹುದು ಬಯಲ ಇರವು.

ಹರವೆ ತಗ್ಗುತಿದೆ; ಹರವೆ ನುಗ್ಗುತಿದೆ
ಹಿಗ್ಗುತಿಹುದು ಹರವು
ಮೊಗ್ಗು ಮೊಗ್ಗಾಗಿ; ಅರಳು ಅರಳಾಗಿ
ಹರಳುಗೊಳುವ ಇರವು.

ಅರಬು ಏಕೆ? ಬರಬೇಕೆ? ಮರೆವೊ? ಓ
ಅರಿವೆ ಅರಿವೆ ಇಹುದು
ಸ್ವರದ ಮೂರ್ಛನೆಗೆ ರಾಗ ಲಯದ ಕಲೆ
ತಲೆಯು ತೂಗುತಿಹುದು.

ತಾ ಎಂದ ಅರಿವು ಬಾ ಎನುವ ಅರಿವು
ನಾ ಎನುವ ಅರಿವು ಇಳಿದು
ಜೋ ಎನುವ ಅರಿವು ಭೋ ಎನುವ ಅರಿವು
ಬರುತಿಹುದು ತಮದ ಕಳೆದು.

---

# ಭರತ

ಹುಟ್ಟಿದಾಗಳೇ ವೀಳ್ಯವೆತ್ತಿದನು
ಮುಕ್ತಿಗಾಗಿ ಭರತ
ತಿಂದ ತಂಬುಲದ ಹಾಗೆ ಉಗುಳಿದನು
ತನುವ ರಸಿಕ ವಿರತ.

ಎಂದು ಹೋದನೋ ಎಂದು ಇದ್ದನೋ
ಲೇಖ ಅಡಗಿ ಇಹುದು
ನೆಲದ ನರುಗಂಪಿನಂತೆ ನೆಲಸಿದಾ
ಕೀರ್ತಿ ಇಡಿಗಿ ಇಹುದು.

ಭರತ ಖಂಡವಿದು, ಭಾರತೀಯ ಸಂ–
–ತತಿಯು ಅಮರವಾಗಿ
ಅವನ ರಸಸ್ಮೃತಿಯಿಂದ ಹಬ್ಬುತಿದೆ
ಈಗು ಕಮರದಾಗಿ.

ಅರಸನಂತೆ ಮನೆಮನೆಯ ಪುರುಷ
ರಸವಂತನಾಗಿ ಬಾಳಿ
ಪ್ರಕೃತಿಯನ್ನೆ ರಸಮಯವ ಮಾಡನೇ
ದಿವ್ಯ ದೇಹ ತಾಳಿ?

ಕ್ಷೇತ್ರ ಮರೆಯದಿದೆ, ಬೀಜ ಮರೆಗೆ ಇದೆ.
ಕಲ್ಪವೃಕ್ಷವಾಗಿ
ಸರಿಮುಹೂರ್ತ ಅಂಕುರಿಸಿ ತರದೆ ಅದು
ಬರದೆ ಲಕ್ಷವಾಗಿ.

ಭೂಮಿ ಬಂಜೆಯೇ ? ಬೀಜ ಬರಡೆ ? ಪಡೆ–
–ದದ್ದು ಕೂಡಿ ಬರದೇ ?
ಒಕ್ಕಲಾದ ಎದೆಯಲ್ಲಿ ತಪವು ರವಿ–
–ಯಾಗಿ ಮೂಡಲಿರದೇ ?

———

# ಶಾರದೆಯೇ !

ಜಯದೇವಿ ಜಯದೇವಿ ಜಯ ಶ್ರೀ ಶಾರದೆಯೇ
ನಾಲಗೆ ರಂಗವ ಮಾಡಿದೆ, ಮನೆ ಮಾಡಿದೆ ಎದೆಯೇ ॥ ಜಯದೇವಿ ॥

ಮೌನದ ಬಸಿರೊಳಗೆದ್ದಿಹ ನಾದದ ಬಲೆಯಲ್ಲಿ
ಬ್ರಹ್ಮಾಂಡಂಗಳು ಜೋ ಜೋ ಆಡುವ ನೆಲೆಯಲ್ಲಿ
ವೇದದ ಮಂತ್ರವ ವಾದವ ಮಾಡುವ ತಲೆಯಲ್ಲಿ
ನೀರೋ ಸೀರೆಯೊ ಎನುವೊಲು ಇಹ ರಸ ಶಿಲೆಯಲ್ಲಿ ॥ ಜಯದೇವಿ ॥

ಬ್ರಹ್ಮನು ಆದನು ಮುದುಕನು, ಆದರು ಅಮರತನು
ರಸವತಿಯನು ಒಳಗೂಡಿರೆ ಸಂಜೀವನಯುತನು
ಮಾತಿನ ಮಳೆಯೊಡ ಬರುವನು ಭಾವದ ಮಾರುತನು
ನಿನ್ನ ಉಪಾಸನೆ ಮಾಡುವ ಸಾರಸ್ವತ ಸುತನು ॥ ಜಯದೇವಿ ॥

ವೀಣಾಪಾಣಿಯೆ, ವಾಣಿಯೆ, ಓ ಬ್ರಹ್ಮನ ರಾಣೀ
ಮರೆವನು ಹೊಡೆದೋಡಿಸಿ ಕೊಡು ಹೊಸ ಅರಿವನು ಜಾಣೀ
ನೀ ಹಾರಕ ವಸನೇ, ಶತ, ಶತ ತಾರಕ ವೇಣೀ
ನವಕಲ್ಪದ, ನವಕಲ್ಪನೆ, ನವನಾಕಶ್ರೇಣಿ ॥ ಜಯದೇವಿ ॥

---

# ಬೆಳಗಬೇಕು

ಇರುವು ಅರಿವಿನೊಳು ಹರವಿಕೊಳ್ಳುತಿಹೆ
ಹಿಗ್ಗಿನೊಂದು ಬಟ್ಟೆ
ಬೀಜ ವೊಳೆತು ಹೂತಿರಲು ಕಂಪು
ಅದು ಏನು ಕಣ್ಣು–ಕಟ್ಟು ?

ಮೈಯು ಗೊರಟದಲಿ ಉಸಿರು ಚಿಗುರುತಿದೆ
ಬಗೆಯು ಮೊಗ್ಗು ಹೂತು
ಅರಿವು ಕಾತು ಹಣ್ಣಾಗುತಿಹುದು ಒಳ–
ಹಿಗ್ಗಿ ಬೀಜ ಬೀತು.

ಬೀಜದಲ್ಲಿ ಅಡಗಿಹುದು ಮರವು ಮರ–
–ದಲ್ಲಿ ಅಡಗಿ ಬೀಜ
ತೇಜವೆಂಬ ಬಸಿರಲ್ಲೆ ಕತ್ತಲಿಹೆ
ಕತ್ತಲಲ್ಲೆ ತೇಜ.

ಮಣ್ಣಿನಲ್ಲಿ ಮಣ್ಣಾಗಬೇಡ ಕಣ್ಣಾಗು
ಗುಪ್ತ ತೇಜ !
ಇರುಳಿನಲ್ಲಿ ನೀ ಕರಗಬೇಡ ಅದ
ಬೆಳಗಬೇಕು ರಾಜ !

—·—

# ನೆಂಕಾ

ನೆಂಕಾ........ ?
ಮೊದಲೇ ಡೊಂಕಾ
ಬಹಳ ಬಿಂಕಾ
ಬಣ್ಣ ಬಣ್ಣದ ಮಾತು
ಬರಿ ತೂತು, ತೂತು.
ಕತ್ತಲೆಯು ಇವನ ಮನೆ
ಬೆಳಕು ಕನಸು.
ಇವನ ತಕ್ಕಡಿಗಿಲ್ಲ ಸರಿದಂಡಿಗೆ
ಇವನು ತಿನ್ನುವದು ಕನಸಿನ ಮಂಡಿಗೆ
ಇವನ ಮಾಪು
ಭಾಪು, ಭಾಪು.
ಇವನ ಕಣ್ಣಿನ ಚೂಪು
ಶುದ್ಧ ಬೇವಕೂಫು
ಏನೊ ಕಾಣುತ
ತಾನು ಎಲ್ಲೊ ಹೊಕ್ಕ.
ಇತ್ತು ಜೇಡನ ಬಲೆಯು
ಇರಲಿಲ್ಲ ಜೇಡ........
ಆದರೂ ಅದರಲ್ಲಿ ಇವನು ಸಿಕ್ಕ
ಒದ್ದಾಡಿದಾ, ಜಿಗಿದಾಡಿದಾ
ಕಾಲ್ಬಿಚ್ಚಿಕೊಂಡಾ ಕೈಕಚ್ಚಿಕೊಂಡಾ
ಕಣ್ಣಿಗಿದೆ ಕಟ್ಟು
ಗೋಣಿಗಿದೆ ನೇಣು
ಯಾವುದೋ ದಾವಣಿಯು ಹಾದಿಯುದ್ದಾ,

ಬಿದ್ದಾ — ಎದ್ದಾ
ಕೊರಳಿಗಿದೆ ಗುದ್ದಿ
ಬಾಯಿಗೆ ಮಕಾಡಾ
ಯಾರೊ ಅಂದರು ಬಡವಾ
ಯಾರೊ ಅಂದರು ಭಡವಾ.
ಬಿದ್ದ ಗೂಳಿಗೆ ಆಳಿಗೊಂದು ಕಲ್ಲು
ಹೊಟ್ಟೆಯಲ್ಲಿಯೆ ಕೊಳಕ
ಅಂತೆ ಹುಳಕ.
ಒಂದೆ ಮಗ್ಗುಲಿಗಿಲ್ಲ ಇವನ ನಿದ್ದೆ
ಗಡಬಡಾ
ಧಡಪಡಾ
ಲಡಬಡಾ
ಕನವರಿಕೆ, ಬಡಬಡಿಕೆ,
ಇಲ್ಲೊ ಡಂಬಡಿಕೆ.
ಬಿದ್ದ ಹಾಸಿಗೆಯಲ್ಲೆ ಎಲ್ಲ ಯುದ್ಧಾ
ಕನಸಿನಲಿ ಸತ್ತರೂ
ಎಚ್ಚರದೊಳೆದ್ದಾ.

———

# ದೃಷ್ಟಿ-ಸೃಷ್ಟಿ

ಯಾವ ದಿಗಂತದಿ ಏನು ಮೂಡಿತೋ
ನೋಡಿತೊಂದು ದೃಷ್ಟಿ.
ಕಾಂಬ ಕಣ್ಣುಗಳ ಗೊಂಬೆಗಳಲಿ ಅದು
ತೋರಿತಾಗ ಸೃಷ್ಟಿ.

ಮಾತು ಕಟ್ಟುತಿದೆ ನಾಟ್ಯರಂಗವನು
ಭಾವ ಪಾತ್ರವಾಗಿ
ಹೃದಯ ವೇದ್ಯ ಸ್ವವೇದ್ಯ ಪುಷ್ಟಿ
ಸಂತುಷ್ಟಿಗಾತ್ರವಾಗಿ.

ಕೊಂಬೆ ಕೊಂಬೆಯಲಿ ರೆಂಬೆ ರೆಂಬೆಯಲಿ
ಬೇರೆ ಬೇರೆ ಹೂವು
ಮೂಲ ಒಂದು ಹಲವರ್ಣನಾಮ
ಆ ತಾವು ನಾವು ನೀವು.
ಅಂಕಿತಕ್ಕೆ ಅಂಕಿತತೆ ಇರಲಿ
ಸದ್ಭಾವ ಮುದ್ರೆ ಬೇಕು.

———

# ಚಿಗುರು-ಬೆಳಕು

ಇದು ಸುಖಸ್ಪರ್ಶ. ಮೈಗೊಂಡು ಬಂತು
ಇದು ಸೂಸಿ ಬಂದ ಹರ್ಷ
ಮಗುಗಳಾಗಮನ ಜೀವ ಸಂಗಮನ
ಜಗಕೆ ಪುಷ್ಪ-ವರ್ಷ.

ಮನದ ಮೂಲೆ ಮೂಲೆಯಲಿ ಮಲಿತ ತಮ
ಶಮನಗೊಳಿಸಲೆಂದು
ಬಳಿಗೆ ಬಂತೊ ಈ ಚಿಗುರು-ಬೆಳಕು
ಮನೆಮನೆಯನುಳಿಸಲೆಂದು.

ದೇವ ಮನದ ಸ್ಮಿತಬಿಂದು ಒಂದು
ಒಂದೊಂದು ಮನೆಗು ಜೇರಿ.
ಜೀವಜಾತ್ರೆಯಲಿ ದಿನಂಪ್ರತಿಯು ಶಿವ-
-ರಾತ್ರಿಗಿಹುದೆ ಮೀರಿ ?

———

# ಮುಖ ಮಂಟಪ

‘ ಒಗಟಾ ’ ಎಂದರು
ಇದನು ಒಡೆಯಬೇಕಲ್ಲ ?
ತರಬೇಕೆ ಜೇರಿ ಕಲ್ಲಾ
ತಲೆಯೆ ಇರುವಾಗ !
ಇದಿರಿತ್ತು ಬಂಡೆಗಲ್ಲು,
ಮೇಲಿತ್ತು ಚಿತ್ರಾ;
ಕೆಳಗಿತ್ತು ಬರೆಹಾ;
ತಲೆಗಿತ್ತು ಕೊಂಬು
ಎತ್ತೆನ್ನಬಹುದೋ ?
ಲಂಬಕರ್ಣಾ....
ಜೋಲು ಹೊಕ್ಕೆಯೊಳಿತ್ತು ಅದರ ಮರ್ಜಿ
ಹಿಂಗಾಲಿನೊಳಗಿತ್ತು
ಆದರ ಕಸರತ್ತು.
ಆದರೂ ಎತ್ತಿನದೆ ಹಿಂಭಾಗದಂದ
ಕಾಲ ಕೆದರುವ ನ್ಯಾಯವಿಲ್ಲ ಮುಂಭಾಗ
ಆದರೂ ಕೊರಳು ಇದೆ ಎತ್ತಿನಂದ.
ಎಷ್ಟು ಮಿಶ್ರ....
ಯಾ ಕತ್ತೆ ಕೆತ್ತಿದನೋ
ಕೆತ್ತೇಬಜೇ ?
ಏನೋ ಇರಬೇಕಲ್ಲಿ ಗುಪ್ತ ಕಂತ್ರಾಟಾ,
ಹಿಕಮತ್ತಿನಾಟಾ.
ಚಿತ್ರದಷ್ಟೇ ತಿರುಗುಮುರುಗು ಲೇಖಾ.

ಎತ್ತ್ರೋ ಕತ್ತ್ರೆ ???!!....
ಪ್ರಶ್ನೆಗಳೆ ನಿಂತಿಹವು ಟೊಂಕ ಮಣಿಸಿ
ಉದ್ಗಾರ ಸರಿದಿಹವು ಸೆಟೆದು ದೂರ.
ಆಹಾ ಮಹಾ ವಾಕ್ಯ
ಯಾವ ವಿಧಿಯೋ?
ಕ್ರಿಯೆಯು ಸುಪ್ತ; ಕರ್ತೃ ಗುಪ್ತ.
‘ಎತ್ತಲೋ ಕತ್ತಲೊ’
ಈ ಮೂಕ ಮುಂಡಿಗೆಯು
ಎತ್ತಿದವ ಜಾಣ.
ಇರಿಪಾಡಿ ಕೊಂಬನೋ ತಾನೆ ಕೋಣ.
ಸರ್ಗಕಾಸಲವಿರಲಿ ಪೈಲವಾನ
ಪಡೆದ ದೈವಾನ!

— — —

## ಜಯಂತಿ

ಭೂಮಿಯೊಡನೆ ಕಾಲ ಕೂಡ
ತಿರುಗಿ ಮರುಳಿ ಬರುತಿದೆ.
ನಿನ್ನ ಧರ್ಮ ನಿನ್ನ ಮರ್ಮ
ತಿಳಿಯುವುದೇ ಮರೆತಿದೆ.

ಪರಸ್ಪರರ ತಪ್ಪು ಕಂಡು
ಒಪ್ಪ ಹಾರಿ ಹೋಗಿದೆ.
ಬಾ ಜಯಂತಿ, ಹೋ ಜಯಂತಿ
ಹಳೆಯ ಲೆಕ್ಕ ಸಾಗಿದೆ.

ಪಕ್ಷ ಭೇದ ನೀತಿಯಿಂದ
ಜನ ಅತಂತ್ರವಾಗಿದೆ.
ಆದರ್ಶದ ವಾದವೆಲ್ಲ
ಗಾಳಿ ಮಂತ್ರವಾಗಿದೆ.

ನಿನ್ನ ತೂಕ ನಿನ್ನ ತಾಳ್ಮೆ
ನಿನ್ನೆಚ್ಚರ ಯಾರಿಗೆ ?
ಗುತಿಕೆಯಿಂದ ಎಳೆಯುತಿಹರು
ಹೊಸ ಹೊಸ ಹೊಸ ದಾರಿಗೆ.

ಸತ್ಯವನ್ನು ಎಲ್ಲೊ ಬಿಟ್ಟು
ಆಗ್ರಹವನೆ ಹಿಡಿದಿದೆ.
ಎಡವಿದಲ್ಲೆ ಮತ್ತೆಡಹುತ
ಪ್ರಗತಿ ಎತ್ತೊ ನಡೆದಿದೆ.

ಸತ್ಯ–ಕರ್ಮ–ಚಂದ್ರ–ಗಂಧ
ತಂದೆ ನೀನು ಜಗದಲಿ.
ಪ್ರೇಮದ ನವಪುತ್ತಳಿಯನೆ
ನೀ ತಾಯೊ ಯುಗದಲಿ.

ಭಾರತೀಯ ಕಂದ ನೀನು
ಪಾರತಂತ್ರ್ಯದುರಿಯಲಿ.
ಉದಯವಾದೆ ಸದ್ದಿಲ್ಲದೆ
ಆ ಸುದಾಮ ಪುರಿಯಲಿ.

ರಾಣಿ ರಾಜ್ಯ ಮನೋ ರಾಜ್ಯ
ಮಹಾನ್ಯಾಯವಾಗಿರೆ.
ಸ್ವಾತಂತ್ರ್ಯದ ಘೋಷದಲ್ಲಿ
ದಿಗ್‌ಬಂಧನ ಸಾಗಿರೆ.

ಖಂಡ ಖಂಡಗಳಲಿ ಬಲಿಯೆ
ಪುಂಡತನವ ನಡೆಸಿದೆ.
ಖಂಡಿತದಲಿ ಕಂಡ ಸತ್ಯ
ನಿನ್ನ ಹುಚ್ಚು ಬಿಡಿಸಿದೆ.

ಅಬಲರನ್ನೆ ಪ್ರಬಲರೆಮರ—
—ಹಿಂಸೆಯಿಂದ ನಿಲಿಸಿದೆ.
ಮತ್ತೆ ಮತ್ತೆ ಸತ್ಯ ನುಡಿದು
ಮತ್ತರ ಮನ ಒಲಿಸಿದೆ.

ಭ್ರಾಂತರಲ್ಲಿ ಶ್ರಾಂತರಲ್ಲಿ
ಕ್ರಾಂತಿ ತಂದೆ ಮೋಹನಾ.
ಸೇವೆಗೊಂದು ಕಾಂತಿ ತಂದೆ
ಆದಕೆ ಆದೆ ವಾಹನಾ.

ನಡೆಯು ನುಡಿಯು ಮಾಟದಿಂದ
ಚರಿತೆಗೆ ಅಚ್ಚಿರಿಸಿದೆ.
ಶರಣರಿಗೋ ಮರಣವಿಲ್ಲ
ಜನರನು ಎಚ್ಚರಿಸಿದೆ.

ಪ್ರತಿ ಜಯಂತಿ ವೈಜಯಂತಿ
ನವಮಾನವನುದಯಕೆ
ಆಹ್ವಾನವು ಡಾನಪಿಸಿದೆ
ಮಾನವ ಸಮುಹೃದಯಕೆ.

———

# ನಮ್ಮ ಕೊನೆಯ ಶರಣು

## ( ಹುತಾತ್ಮ ಗೀತ )

[ ಡಾಕ್ಟರ ಜೋಸ ರಿಝ್ಝಾಲರು (1861 to 1896) ಫಿಲಿಪಾಯಿನ್ ದ್ವೀಪದ ಸ್ವಾತಂತ್ರ್ಯ ಸಮರದಲ್ಲಿ 'ಹುತಾತ್ಮ'ರಾದರು. ಇವರನ್ನು ಗಲ್ಲಿಗೇರಿಸುವ ಮುನ್ನಾದಿನ, ಡಿಸೆಂಬರ ೨೯, ೧೮೯೬, "My Last Fare-well" ಈ ಕವನ ಅವರು ಬರೆದರು. ಅವರ ಶತಸಾಂವತ್ಸರಿಕ ಉತ್ಸವ ೧೯೬೧ರಲ್ಲಿ ಆಗುವದಿದೆ. ಇದನ್ನು ಇಂಗ್ಲೀಷಿನಲ್ಲಿ ತರ್ಜುಮೆ ಮಾಡಿದವರು 'ನಿಕ್ ಟೊಕ್ವಿನ್' ಅವರು. ಮೂಲ ಕವನ ಸ್ಪ್ಯಾನಿಶ್ ಭಾಷೆಯಲ್ಲಿದೆ. ಅದರ ಭಾವಾನುವಾದವನ್ನು ಲಾವಣಿ ಛಂದದ ಗತ್ತಿನಲ್ಲಿ ಮಾಡಿದ್ದಾಗಿದೆ. ]

—ಅಂಬಿಕಾತನಯದತ್ತ

ನಾಳೆ । ಬೆಳಗ್ಗೆ ಐತಿ ಮಹ ಮರಣಾ
ಶರ । ಣಂತಾವ ನಮ್ಮ ಪಂಚ ಹರಣಾ
ಹಸ । ನುಳದಾವ ನಮ್ಮಂತಃಕರಣಾ
ದೇವ । ದೇವನು ಮಾಡ್ಯಾನೊ ಕರುಣಾ
ನಾಳೆ । ಹೊತ್ತು ಮೂಡ ಬಂತೈತಿ ಮರಣಾ ॥ ಪಲ್ಲ ॥

ಶರಣು ಶರಣೆಂಬೆ ನೆಚ್ಚಿನಾ ನಾಡs
ನೀ । ಸೂರ್ಯಾನ ಮೆಚ್ಚಿನಾಕಿ ನೋಡs
ಮೂಡಲ । ಕಡಲಾಗ ಮುತ್ತು ಹುಟ್ಟಿಧಾಂಗ
ಇಂದ್ರನ । ಬನಾನ ಕಡಕೊಂಡು ಬಿತ್ತೊ ಹಿಂಗs.
ಇಂಥಾ । ನಾಡಿಗಾಗಿ ನಮ್ಮ ದೇಹಾ
ಬೇಡಿದಾಗ ನೀಡಲಿಕ್ಕೆ.

ನಿಂತೇವು | ಒಂಟಿಕಾಲ ಮ್ಯಾಗಽಽಽ.
ಉಳಿದಿ | ಲ್ಲೇನೇನು ಇನ್ನಿದರಾಸೀಽ.
ಏನೊ | ಆಗ್ಯೆತಿ ಒಂದಿಷ್ಟು ಬಾಸಿಽ
ಆದ್ರೂ | ಕೊಟ್ಟೇವು ಪ್ರೈ ಹಪದಿ ಹಾಸಿ.

ನಮ್ಮ ಹೊಸಾ ಹರೇದಾಗ
ಎಳೇತನಾ ಖರೇದಾಗ
ಮಿಂಚತಿತ್ತು ಬರೇದಾಗ
ಉಕ್ಕೈಕ್ಕಿ ಉತ್ಸಾಹ ಕಿರಣಾ.

ಆವಾಗ | ಬರಬೇಕು ಇತ್ತಽ ಈ ಮರಣಾ
ಆಗ | ಕೊಡಬೇಕು ಇತ್ತಽ ತಾಯೀ ಚರಣಾ.

ಈಗಾದರೂ ಏನಾತು
ಸಲ್ಲಿಸತೇವು ಕೊಟ್ಟ ಮಾತು
ನಿಮ್ಮ ಒಳಿತಿಗಾಗಿ ಆತ ಸಾವು.

ಶರ | ಣಂಪೇವು ಅಂತಽ ನಿಮಗಽ ನಾವೂ
ನಾಳೆ ಹೊತ್ತು ಮೂಡ........

ವ್ಯೂಹಕ್ಕ ವ್ಯೂಹಾ ಹೂಡಿ
ಯುದ್ಧದ ಸನ್ನಿ ಮೂಡಿ
ಸಂಶಯ ಗಿಂಶಯ ಕಳೆದೂಽಽ.

ವೀರ ಬಿಟ್ಟ ಗರಿ ಬಾಣಾ
ತೂರತಾರ ತಮ್ಮ ಪ್ರಾಣಾ
ದುಮ್ಮಾನ ದುಃಖಾನ ತೊಳದುಽಽ.

ತಾವರಿಯು ತಂಪಿನ್ಯಾಗ
ಕಣಗೀಲಿ ಕಂಪಿನ್ಯಾಗ
ಮದಗುಣಿಕಿಯು ಜಂಪಿನ್ಯಾಗ.

ಎಲ್ಲಿ ಬಂದ್ರು ಏನು ನಮಗ ಮರಣಾ
ಶೂಲಾನ ನೆಟ್ಟಿರಲಿ
ಹಾಳ ಬಯು ಮೆಟ್ಟಿರಲಿ
ಯಮನವರನಿಟ್ಟಿರಲಿ.
ಅಗ್ಗಿ ಹೊಕ್ಕು ಏರಿಸೇವು ದವನಾ

ಮಸಿಗಾಗಿ, ನಾಡಿಗಾಗಿ
ಹ್ಯಾಂಗ ಸತ್ತರೇನು ಸಾವು.
ಎಲ್ಲಾನು ನಮಗ ಸರಿಸವನಾ
ನಾಳೆ ಹೊತ್ತ ಮೂಡ........

ಸಂಚ ಸಂಚ ಉಷಃಕಾಲ
ಇಂಥಾ ಮೂರ್ತಾ ಬರಾಕಿಲ್ಲ
ಬಂತಣ್ಣಾ ಎಂಥಾದೀ ಹಗಲಾ
ಖುಲ್ಲಾ ಆಗ್ಯಾವ ಸ್ವರ್ಗದ ಬಾಗಿಲಾಽಽ.

ಸೂರ್ಯನ ಜ್ಯೋತಿ ಝಗ್ ಅಂತಽ
ಬೆಳಗೊ ಸಂಪ ಹೊತ್ತಿನ್ಯಾಗ
ಬಂದೈತಿ ಪರಲೋಕ ಪಯಣಾ.

ಕಾಳರಾತ್ರಿ ಕಪ್ಪಗಾಗಿ
ಸಪ್ಪಗಾಗಿ ತೆಪ್ಪಗಾಗಿ
ಹಿಂದ ಬಿದ್ದು ಮುಂದ ಬಂತೊ ಹವನಾಽ.

ಸುಣ್ಣಾ ಬಣ್ಣಾ ಮಾಡಬೇಕು
ತೋರಣಾ ಕಟ್ಟಿ ನೋಡಬೇಕು
ಮಾನವಿಮ್ಮ ದಸರೇಥಾಂಗ ಮನೀಽಽ.

ಮುಂಜಾವಿನ ಕೆಂಜ ಬೆಳಕಿಗೆ
ಕೆಂಪು ಕಡಿಮೀ ಬಿದ್ದಿದ್ರ
ಥಳೀ ಹಾಕ್ರಿ ನಮ್ಮ ರಕ್ತದ ಹನೀಽಽ.
ಜಳಕಾ ಮಾಡ್ರಿ
ಓಕುಳಿಯಾಡ್ರಿ.
ಅಸಿಮಿಸಿ ನೋಡಬ್ಯಾಡ್ರಿ
ಬಂದೈತಿ ನಮ್ಮ ಬಾಳಿಗ್ಗೊನೀಽಽ.
ನಾಳೆ ಹೊತ್ತ ಮೂಡ... ....

ಮುಕಮೊಸಿ ಒಡೆದಿರಲಿಲ್ಲಾ
ಆಗಽನ ನಮಗೆಲ್ಲಾ
ಬಿದ್ದಿತ್ತವ್ವಾ ತಾಯಿ ನಿನ್ನ ಕನಸುಽ.

ಹರೇದಾಗಽ ಕೇಳೋದೇನೂ
ರಕ್ತದಾಗಽ ಹೊಕ್ಕಿ ನೀನು
ನೀನಽ ಆಗಿಬಿಟ್ಟ ನಮ್ಮ ಮನಸುಽ.

ರತ್ನದ ಕಂಬಿಯುಂಥಾ
ಜಗದಂಬಿ ಮೂಡಿ ಬಂದಿ
ಮೂಡಽಲ ಕಡಲಽ ಒಡಲಽ ಸೀಳಿಽಽ.

ಕಷ್ಟಾಗ ಸುಖ ಉಕ್ಕಿ
ಹುಬ್ಬೇರಿಸಿ ನೀನು ನಕ್ಕಿ
ಹೊಕ್ಕೈತವ್ವಾನಿ ನಮ್ಮೈಯಾಗ ಗಾಳೀಽ

ದುಃಖಿಲ್ಲಾ ಸುಕ್ಕಿಲ್ಲಾ
ಕುಂದಿಲ್ಲಾ ಬಂದೆವ್ವಾ
ಗೌರವದಲಿ ಗೌರೀ ರೂಪಾ ತಾಳಿಽಽ.
ನಾಳೆ ಹೊತ್ತ ಮೂಡ........

**ಉತ್ತರಾಯಣ**

ಏನು ಮಂತ್ರಾ ಹಾಕಿದೆವ್ವಾ
ನಮ್ಮಾಽ ಜೀವಕ್ಕ ನೀನು
ನಮ್ಮಾಽ ಜೀವಾ ಪ್ರಾಣ ನೀನಽ ಆದೀಽಽ.

ಅಲಕ್ಷಂತ ಹಾರಿಕೊಂಡು
ಹೊತ್ತಿಕೊಂಡ ಕೊಂಡದಾಗ
ಹಿಡಿದೇವವ್ವಾ ನಿನ್ನ ಸ್ವರ್ಗದ ಹಾದೀಽಽ.

ನಮ್ಮ ಸಾವಿನ್ಯಾಗ ನಿನಗಽ
ಬದುಕಾದ್ರ ಸಾಕು ನಮಗಽ
ಬಿದ್ದಿರ್ತೇವಿ ಹೊತ್ತುಕೊಂಡು ಗಗನಾಽಽಽ.

ನಾಽವು ಬಿದ್ದರೇನಾತು
ನೀನು ಎದ್ದಿ ಅದೇ ಸಾಕು
ನೋಡುತ್ತಿರಲಿ ನಿನ್ನ ನೀಲೀ ನಯನಾ.

ತಾಯೀ ನಿನ್ನ ತೊಡಿ ಮ್ಯಾಲೆ
ಜೋಗುಳಿಸಿದ ಹುಡೀ ಮ್ಯಾಲೆ
ಹಾಕಿರ್ತೇವಿ ಶಾಶ್ವತ ಶಯನಾಽಽ.
ನಾಳೆ ಹೊತ್ತು ಮೂಡ... ....

ನಮ್ಮ ಗೋರಿ ದಿನ್ನಿ ಮ್ಯಾಲೆ
ಎಂದಾರೆ ಒಂದ ದಿನಾ
ಎದ್ದು ಮೂಡಿತೊಂದು ಸಾದಾ ಹೂವುಽಽ.

ಕಸಾ ಕಡ್ಡಿ ತಲೀ ಮ್ಯಾಲೆ
ತೂಗಾಡಿದರೂಽ ಸಾಕು
ತಿಳದೇಽವಿ ಪೂಜಿ ಅಂತ ನಾವುಽಽ.

ಮುದ್ದಿಟ್ರೆ ಆದನs ನೀವು
ಮರತs ಹೋದೀತು ಸಾವು
ಬಂದಿತಣ್ಣಾ ನಮಗ ಜೀವಾ ಮರಳಿ.

ತಣ್ಣಗಾದ ಕಲ್ಲಿನೊಳಗೂ
ಹುಟ್ಟೀತು ಸಣ್ಣ ಕಂಪಾ
ಮಾರೀ ಸವರೀಧಾಂಗ ನಮಗ ಹೊರಳಿss

ನಿಮ್ಮ ಉಸುರೀನುಸುರೀನೊಳಗೂ
ಹೆಸರುಗೊಂಡು ಕರೆಧಾಂಗ
ನಿಮ್ಮ ಕರುಳೂ ಬಂದೀತು ಅರಳಿss.
ನಾಳೆ ಹೊತ್ತು ಮೂಡ........

ಶಾಂತವಾಗಿ ಕಾಂತೀಯಿಂದ
ರಾತ್ರೀ ಚಂದ್ರಾಮರಾಯ
ಪಹಾರೇ ಮಾಡುತಿರಲಿ ನಮ್ಮ ಮ್ಯಾಲss.

ಬೆಳಕೀನ ಕೆಚ್ಚಲಾಗಿ
ಸಿಚ್ಚ ಮೂಡಲಾಗಿ ನಮಗ
ನಸುಕಿನ್ಯಾಕಿ ಕುಡಿಸತಿರಲಿ ಹಾಲss.

ಮರಾಮರಾ ಮರಗತಿರಲಿ
ಮರಾ ಗಿಡಾ ಸೇರಿಕೊಂಡು
ಭರಾ ಭರಾ ಹರಿಯೋ ಗಾಳಿ ಕೂಡಾss.

ಹಾರೋ ಹಕ್ಕಿ ಎರಗಿ ಸೋತು
ನಮ್ಮ ಶಿಲಬೀ ಮ್ಯಾಲ ಕೂತು
ಹೇಳತಿದ್ರs ಹೇಳಲೊಂದು ಹಾಡಾss.

ಶಾಂತೀ ಸೋಬಾನೇ ಹೇಳೀ
ಸಮಾಧಾನ ಮಾಡತಿದ್ರು
ಬ್ಯಾಡೋ ಗೆಣೆಯಾ ಅದನ್ನ ತಡವಬ್ಯಾಡಾSS.
ನಾಳೆ ಹೊತ್ತ ಮೂಡಿ........

ರವಿ ಸಾಕ್ಷಿಯಾಗಿ ನರೀ—
-ಮದಿವೀ ಆಗೋ ಹೊತ್ತಿನೊಳಗ
ಮಳಿ ಉದರಲಿ ಅಕ್ಕಿಕಾಳ ಗತೀSS.

ಉಗೀ ಆಗಿ ಮಂಜ ಆಗಿ
ಮತ್ತ ಮ್ಯಾಲ ಏರಿ ಹೋಗಿ
ಸ್ವರ್ಗದಾಗ ಹೇಳಲಿ ನಮ್ಮ ಕಥಿSS.

ಅರ್ಧಾ ಆಟದಾಗ ಹೀಂಗ
ಕೈಬಿಟ್ಟು ಹೋದ ಹ್ಯಾಂಗ
ಅತ್ತರಳಲಿ ಗೆಳೆಯಾ ಯಾವನಾರೆSS.

ಸಂಜಿ ತಂಪು ಹೊತ್ತಿನ್ಯಾಗ
ನಮ್ಮನ್ನ ನೆನಿಸಿಕೊಂಡು
ಬೇಡಿಕೊಳ್ಳಲಿ ನಮಗಾಗಿ ಬ್ಯಾರೆSS.

ನಮ್ಮ ನಾಡು ನಮ್ಮ ಜನಾ
ನಮಗಾಗಿ ಬೇಡಿಕೊಳ್ಳಲಿ
ದೇವರೊಳಗ ಆಗೋ ಹಾಂಗ ಸೇರೆSS.
ನಾಳೆ ಹೊತ್ತ ಮೂಡ........

ಬೇಡಿಕೊಳ್ರ್ಯೊ ಬೇಡಿಕೊಳ್ರೀ
ಸತ್ತಾವ್ರ್ನ ನೋಡಿಕೊಳ್ರೀ
ಗತಿ ಇಲ್ದ ಸತ್ತಾರೆಷ್ಟೋ ಜನಾSS.

ತಡೀಲಾರ್ದೆ ತಡಕೊಂಡು
ಬಾಯಿ ಬಿಗಿ ಹಿಡಕೊಂಡು
ಸತ್ತವರಂತಽ ಸೀಗತಾರ ಪ್ರಾಣಾಽಽ.

ಹಡದ ಹೊಟ್ಟೀಕಿಚ್ಚು ಹೊತ್ತಿ
ಬಾಯಿ ಬಾಯಿ ಬಡಕೋತಾರ
ಕಳಕೊಂಡು ಹೊಟ್ಟೀ ಸಂತಾನಾಽಽ.

ರಂಡಿಮುಂಡಿ ಪರಾಧೀನಾ
ಪರದೇಶಿ ಮಕ್ಕಳು ಹೀನಾ
ತುರಂಗದ ನರಕದಾಗ ದೀನಾಽಽ.

ನಾನಾ ರೀತಿ ನಾನಾ ಜನಾ
ಸಾಯ್ತಾರ ದಿನಾ ದಿನಾ
ನಿಮ್ಮ ಮುಕ್ತಿಗಾದರೂ ಮಾಡ್ರಿ ಧ್ಯಾನಾಽಽ.
ನಾಳೆ ಹೊತ್ತ ಮೂಡ........

ಅಮಾಸಿ ಇರುಳು ಹೊತ್ತು
ಮಸಣದಾಗ ಯಾರಿಗೊತ್ತು
ಸತ್ತವರ್ವಽ ಸತ್ತವರ ಮ್ಯಾಲೆ ಗಸ್ತೀಽಽ.

ಸ್ಮಶಾನಾ ಶಿವನ ಸ್ಥಾನಾ
ಗಹನಾ ಗಹನಾ ಅಲ್ಲಿ ಧ್ಯಾನಾ
ಕೋಟಿ ಕೋಟಿ ಭೂತ ಪ್ರೇತ ವಸ್ತೀಽಽ

ಏನಾರೇ ಧನೀ ಕೇಳಿ
ಏನಾರೇ ತಿಳೀಬ್ಯಾಡ್ರಿ
ದೇಶಭಕ್ತರ ದೆಲ್ಲ್ಯಾಽತೊ ಹನನಾಽಽ.

ಅಲ್ಲಿ ! ಇರಬಹುದು ಪೆಪ್ಪಗಾಳಿ
ಬರಬಹುದು ಭದ್ರಕಾಳಿ
ಮುಳಿಗಾಳಿ, ಛಳಿಗಾಳಿ, ಝುಣಣಾಽಽ
ದೇಶಭಕ್ತಿ ಗಾನಾ ಏಕತಾನದಾಗ.
ಗಗನದಾಗ

ನಡೆದಿರತೈತಿ ತೋಂ ತೋಂ ತನನಾಽಽ
ನೆನಸ್ತಿರತೈತಿ । ಜೀವಾ ಶಕ್ತಿ ಶಿವನಾಽಽ
ಕಟ್ಟತಿರತೈತಿ । ನಮ್ಮ ಭಾವಾ ಕವನಾಽಽ.
ನಾಳೆ ಹೊತ್ತ ಮೂಡ.......

ಹೇಳs ಹೆಸರಿಲ್ಲದಾಗಿ
ಹೋದೀತು ಒಂದ ದಿನಾ
ನಮ್ಮ ಹುಗಿದ ಮಣ್ಣಗುಡ್ಡಿ ಸ್ಥಳಾಽಽ.

ಶಿಲುಬೀಯು ಕಲ್ಲ ಕುರುಹು
ಅಲ್ಲೋ, ಇಲ್ಲೋ, ಎಲ್ಲೋ ಬಿದ್ದು
ಸಪಾಟು ಆದೀತೀ ನೆಲಾ.

ಗುದ್ಲೀಲ ಹಡ್ಡಿ ತೆಗೆದು
ಸಲಕೀಲೆ ಸರಿ ಮಾಡಿ
ನೇಗಿಲ ಹೊಡೆದು ನೋಡಿ ಬಿಡ್ರಿ ರಣಾಽಽ.

ಮಣ್ಣು ಆಗಿ ಸುಣ್ಣ ಆಗಿ
ಬೂದಿ ಆಗಿ ಭಸ್ಮ ಆಗಿ
ಹೋಗೊಪ್ಪೈತಿ ಎಲ್ಲಾ ಒಂದಿನಾಽಽ.

ನಮ್ಮ ಮಣ್ಣ ಕಸಾ ಕೂಡ
ಹಸಾ ಆಗಿ ಹುಲ್ಲ ಬೆಳೆದು
ಸಸಿ ಹಸಿ ಕಾಣಲಿ ತಾಯಿ ಕ್ಷಣಾಽಽ.
ನಾಳೆ ಹೊತ್ತ ಮೂಡ........

ಯಾರು ನಮ್ಮ ಅರತರೇನು
ಯಾರು ನಮ್ಮ ಮರತರೇನು
ನಾವು ಮರ್ಯಾಕಿಲ್ಲ ನಮ್ಮ ದೇಶಾಽಽ.

ಇದೇ ಈ ಗಾಳಿವೊಳಗ
ಮುಗಿಲ ತುಂಬ ಧೂಳಿವೊಳಗ
ದಾರೀ ಉದ್ದಾ ತೊಟ್ಟು ಬ್ಯಾರೆ ವೇಷಾಽಽ.

ಕಿನ್ನರರ್ಹಾಂಗ ಕಿನ್ನರಿ ಮಿಡಿದು
ಗಂಧರ್ವರ ಗತ್ತು ಹಿಡಿದು
ಕಿವಿ ತುಂಬತಿರ್ತೇವಿ ನಿಮ್ಮ ಜೋಡಿಽಽ.

ಗಂಧಾ ತೂರಿ ಬೆಳಕ ತೂರಿ
ಬಣ್ಣಾ ತೂರಿ ಹರಃಹೂರಿ
ಗುಜ್ಜಾರಿ ಲಾವಣಿ ಕಟ್ಟಿ ತೋಡಿಽಽ.

ನಂಬಿಗೀಯ ಪಲ್ಲಾ ಮಾಡಿ
ಜೀವದ ನುಡಿ ಜೋಡಿ
ಹಾಡತಿರ್ತೇವಿ ಹಗಲು ರಾತ್ರಿ ಕೂಡಿಽಽ.
ನಾಳೆ ಹೊತ್ತ ಮೂಡಿ........

ದೇವೀ ಅಂತ ನಾವು ನಿಮಗ
ಎಂದಽನ ಅಂದೇವಿ
ಅದಽ ನಮ್ಮ ಕೊರಳಿಗಾತು ಹಗ್ಗಾಽಽ.

ಫಿಲಿಪೀನಾ! ನಾಡದೇವಿ!
ನಮ್ಮ ಕೊನಿ ಶರಣು ಕೇಳಽ
ಅದಽ ನಮ್ಮ ಜೀವಾಳದ ಹಿಗ್ಗಾಽಽ.

ಇದ್ದೆಲ್ಲಾ ಮನೀವಾರು
ಮುಡುಪು ನಮ್ಮ ಚೂರುಚಾರು
ಋಣಾನುಬಂಧ ಬ್ಯಾರೆ ಬಂಧಾ ಭಾವಾಽಽ.

ನಂಬಿಗ್ಗೆ ಸಾವಿಲ್ಲದಲ್ಲಿ
ಗುಲಾಮರಿಗೆ ಬಾಳಿಲ್ಲದಲ್ಲಿ
ಕಾಟಕಾಯಿ ಕಟಕರಿಲ್ಲದ ಠಾವಾಽಽ.

ದೇವರಿದ್ದ ರಾಜ್ಯೇದಾಗ
ದೇವರ ಸಾಮ್ರಾಜ್ಯೇದಾಗ
ಇರತೇವಿ ನಾಳೆ ನಾವು ಜೀವಾಽಽ.
ನಾಳೆ ಹೊತ್ತು ಮೂಡ........

ತಂಗಿಗಳಿರಾ ಶರಣು ಅಂದ್ವಿ
ತಾಯಿಗಳಿರಾ ಶರಣು ಬಂದ್ವಿ
ಶರಣಣ್ಣಾ ಶರಣೊ ತಮ್ಮಾ ನಾವೂಽಽ
ನಮ್ಮ ಜೀವನದ ತೋಳಿತೋಳಿ ನೀವೂಽಽ.

ಮನೀ ಕಣ್ಣು ಮರೀಗಾದ್ರು
ಮುಂದಿನ್ನ ಮರ್ತೀವ್ಹ್ಯಾಂಗ
ಹಳೀ ಪಳೀ ಗೆಣೇರಿಗೆ ಶರಣು
ದಣಿವಾರ್ಸಿ ಹೊತ್ತು ಬಂತು ಶರಣು.

ಯಾರಣ್ಣಾ ಹೊಸಬ ನೀನು ?
ನಿನಗೂನೂ ಶರಣು ನಾನು.
ಪ್ರಾಣಿ ಜಾತಕ್ಕs ನಮ್ಮ ಕೊನೀ ಶರಣುಽಽ.

ನಮ್ಮ ಮುದ್ದೀನ ಮಣಿ ಬಂತು ಬಂತು
ನಮ್ಮ ಹಿಗ್ಗೀನ ಕುಣಿ ಬಂತು ಬಂತು.

ಸಾಕು, ದಣಿಸೀದ ಹಗಲಿನ ಸುದ್ದಿಽಽ
ಆಹಾ । ಸಾವಂದ್ರ ಘನಾ ಘನಾ ನಿದ್ದಿಽಽ.
ನಾಳೆ ಹೊತ್ತ ಮೂಡ ಐತಿ
ಮಹಾ ಮರಣಾ ॥

ನಾಳೆ । ಬೆಳಿಗ್ಗೆ ಐತಿ ಮಹಾ ಮರಣಾ
ಶರ । ಣಂತಾವ ನಮ್ಮ ಪಂಚ ಹರಣಾ
ದೇವ । ದೇವನು ಮಾಡ್ಯಾನೊ ಕರುಣಾ
ನಾಳೆ ಹೊತ್ತ ಮೂಡ ಬಂದೈತಿ ಮರಣಾ........

———

## ಮೊದಲ ಚರಣಗಳು ( ಅಕಾರಾದಿಯಾಗಿ )

———

# ತಿದ್ದಿಕೊಳ್ಳಿರಿ

| ಪುಟ | ಸಾಲು | ಇದ್ದದ್ದು | ಇರಬೇಕಾದದ್ದು |
|---|---|---|---|
| ೧ | ೧೫ | ಅಳಿದರು | ಅಳಿವರು |
| ೩ | ೫ | ಕಾದೆನೆ | ಕಾದೆನೇ |
| ೪ | ೨೨ | ಅಭಯು | ಅಭಯುವ |
| ೫ | ೧೯ | ಕುಳಾರ್ವಣ | ಕುಳಾರ್ಣವ |
| ೭ | ೫ | ಆಬಾಲ್ಯ | ಆಬಾಲ |
| ೭ | ೮ | ಅತ್ರ | ಪುತ್ರ |
| ೭ | ೮ | ಕ್ಷಾತ್ರ್ಯೋಚಿತಾಂ | ಪೌತ್ರ್ಯೋಚಿತಾಂ |
| ೭ | ೧೧ | ವರ್ಮಣೆ | ವರ್ಮಣೇ |
| ೨೨ | ೧೩ | ಪ್ರಲಯುತನೆ | ಪ್ರಲಯುವನೆ |
| ೨೭ | ೧೧ | ಗಾಯುಕ್ಕ ಪಾಯುಕ್ಕೆ | ಗಾಯುಕ್ಕಪಾಯುಕ್ಕೆ |
| ೨೮ | ೧ | ಪ್ರಕೃಯಲ್ಲ | ಪ್ರಕೃತಿಯಲ್ಲ |
| ೩೪ | ೩ | ಬಾಳಿದ | ಬಾಳಿನ |
| ೩೪ | ೧೯ | ಕಾವಿನಲೆ | ಕಾವಿನಲೇ |
| ೩೫ | ೧೩ | ರಹಿತಾ ಪ್ರೀತಿ | ರಹಿತ ಪ್ರೀತಿ |
| ೩೯ | ೮ | ರೆಕ್ಕಿ | ರೆಕ್ಕೆ |
| ೪೪ | ೭ | ಮರೆತಿತೇನು | ಮರೆತೀತೇನು |
| ೪೫ | ೧೧ | ಬೆರಿಯೋ | ಬೆರೆಯೋ |
| ೪೫ | ೧೨ | ನಡಿಸಿರುವಿಯೊ | ನಡೆಸಿರುವಿಯೊ |
| ೪೭ | ೧೭ | ಸ್ಥಿತಿ | ಸ್ಥಿತಿಯು |
| ೬೭ | ೧೯ | ಮೂಡಿತೊಂದು | ಮೂಡೀತೊಂದು |
| ೬೮ | ೧೩ | ಪಹಾರೇ | ಪಹರೇ |
| ೬೬ | ೨೦ | ಹೊಕ್ಕಿತವ್ವಾನಿ ನವ್ವೈಯಾಗ | ಹೊಕ್ಕಿತವ್ವಾ ನಿನ ವ್ವೈಯಾಗ |
| ೭೫ | ೫ | ಕಲಿತಿಯಲ್ಲ | ಕಲಿಕಿಯಲ್ಲ |
| ೭೫ | ೧೦ | ಚಂಪಾಣಿ | ಚ್ಯಾ-ಪಾಣಿ |
| ೭೫ | ೨೧ | ಜಾಣದಿಂದ | ಚಾಣದಿಂದ |